# ಪಂಚಮ

*

ಪಂಚಮ ಪಾಕ್ಷಿಕ

*

ವಿಳಾಸ : 2514, ಎ
ಕೆ. ಜಿ. ಕೊಪ್ಪಲು
ಮೈಸೂರು-14

ಸಂಪುಟ : 6 ಸಂಚಿಕೆ : 22 ಬೆಲೆ : 50 ಪೈಸೆ ಡಿಸೆಂಬರ್ 5. 1982


# ಕಗ್ಗತ್ತಲೆಯ ಖಂಡದೊಳಗೊಂದು ಆಶಾಕಿರಣ!

ಮತ್ತೆ ಈ ದೇಶದ ನೆಲ ಚುನಾವಣೆಗೆ ಸಿದ್ಧವಾಗುತ್ತಿದೆ. ಹೊಸತೇನೂ ಇದರಿಂದ ಆಗಲಾರದು ಎಂಬುದನ್ನು ಸ್ವಾತಂತ್ರ್ಯೋತ್ತರ ಭಾರತದ ಮೂರು ದಶಕಗಳು ನಿಜ ಮಾಡಿವೆ. ಸತತವಾಗಿ ಅಧಿಕಾರದ ಗದ್ದುಗೆಯಲ್ಲಿರುವ ಕಾಂಗ್ರೆಸ್ ಸರ್ಕಾರ ಘೋಷಣೆಗಳ ಸರ್ಕಾರವಾಗಿ ಜನರ ವಿಶ್ವಾಸಕ್ಕೆ ದ್ರೋಹವೆಸಗಿದೆ. ಸಮಾನತೆ, ಸ್ವಾತಂತ್ರ್ಯ, ಮಾನವೀಯತೆಗಳ ಬದಲಿಗೆ ಹಸಿವು, ಅಸಮಾನತೆ, ಅಮಾನುಷತೆಗಳನ್ನು ಬಿತ್ತಿ ಬೆಳೆದದೆ. ಯೋಜನೆಗಳ ಮೇಲೆ ಯೋಜನೆಗಳು ರೂಪಿತವಾದರೂ ಅವೆಲ್ಲ ಈ ನೆಲದ ಸಮಸ್ಯೆಗಳನ್ನು ಕದಲಿಸಲಾರದ ನಿರರ್ಥಕ ಸಾಹಸಗಳಾಗಿವೆ.

ಸಾಮಾಜಿಕ, ರಾಜಕೀಯ ಕ್ಷೇತ್ರಗಳಲ್ಲಿ ನಾಯಕತ್ವ, ಸಿದ್ಧಾಂತಗಳು ಭ್ರಷ್ಟಗೊಂಡು' ತತ್ಪರಿಣಾಮವಾಗಿ ಸಮಾಜದಲ್ಲಿ ವಿಷಪೂರಿತ ವಾತಾವರಣ ಸೃಷ್ಟಿಯಾಗಿದೆ. ಎಲ್ಲ ರಾಜಕೀಯ, ಸಾಮಾಜಿಕ ಸಿದ್ಧಾಂತಗಳನ್ನು ಭೂಮಾಲೀಕ, ಬಂಡವಾಳಶಾಹಿ, ಜಾತಿವಾದಿ ಪಕ್ಷಗಳು, ಸಂಘಟನೆಗಳು ತಿರುಚಿ ಜನರಲ್ಲಿ ಒಡಕು, ದಡ್ಡತನಗಳನ್ನು ಬೆಳೆಸುತ್ತಿವೆ,

ದೇಶದ ಬಹುಸಂಖ್ಯಾತರಾದ ದಲಿತರ, ಮಹಿಳೆಯರ ಮಾನ, ಪ್ರಾಣ, ಹಕ್ಕುಗಳಿಗೆ ಯಾವ ಮನ್ನಣೆಯೂ ಇಲ್ಲವಾಗಿದೆ. ಬಿಹಾರದ ಭೀಕರ ಬರಗಾಲಕ್ಕೆ ಸಿಕ್ಕಿ ತತ್ತರಿಸಿದ ಆದಿವಾಸಿಗಳು ಪ್ರಾಣ ಉಳಿಸುವ ಅನ್ನ ಕೇಳಿ ಮೆರವಣಿಗೆ ನಡೆಸಲು ಹೊರಟರೆ ಗಲಾಟೆ ಮಾಡಲು ಬಂದವರೆಂದು ಅಲ್ಲಿನ ಪೋಲಿಸರು ಗುಂಡಿಟ್ಟು ಪ್ರಾಣ ತೆಗೆಯುತ್ತಿದ್ದಾರೆ. ಸಮಾಜದಲ್ಲಿ ತಮ್ಮನ್ನು ಕೀಳಾಗಿ ಕಂಡು ಕ್ರೂರವಾಗಿ ನಡೆಸಿಕೊಳ್ಳುವುದನ್ನು ಪ್ರತಿಭಟಿಸಿ ಪರ್ಯಾಯವಿಲ್ಲದೆ ತಮಿಳುನಾಡಿನ ದಲಿತರು ಮತಾಂತರಗೊಂಡರೆ ವಿದೇಶಿ ಹಣದ ಹೊಳೆ ಹರಿಯುತ್ತಿದೆ ಎಂದು ಕೋಮುವಾದಿಗಳು ಪೆದ್ದರಂತೆ ಕೂಗುತ್ತಿದ್ದಾರೆ. ಇದರ ಮಗ್ಗುಲಿಗೇ 'ಉರಿಯುತ್ತಿರುವ ಊರಿ'ನ ಉಳಿದ ಯಜಮಾನನಂತೆ ರಾಜಕೀಯದ ಅ, ಆ, ಇ, ಈ ಗೊತ್ತಿಲ್ಲದ ರಾಜೀವಗಾಂಧಿಯೆಂಬ ಮನುಷ್ಯನನ್ನು ದಲಿತರ ಏಕಮೇವ ನಾಯಕಿ ಎಂದುಕೊಳ್ಳುವ ಇಂದಿರಾಗಾಂಧಿಯವರು ಭಾವಿ ಪ್ರಧಾನಿಯನ್ನಾಗಿ **Project** ಮಾಡಲು ಅಹರ್ನಿಶಿ ಶ್ರಮಿಸುತ್ತಿದ್ದಾರೆ. ಈ ಕಾಲೊತ್ತುವ ಊಳಿಗಕ್ಕೆ ರಾಜಕಾರಣಿಗಳು ಹೊಸ ಹೊಸ ಸಿಲ್ಕಿನ ಜುಬ್ಬ ಧರಿಸಿಕೊಂಡು ರೆಡಿಯಾಗುತ್ತಿದ್ದಾರೆ. ಈ ಜನಕ್ಕೆ ಕೋಟ್ಯಾಂತರ ಜನರ ಸಮಸ್ಯೆಗಳಿಗಿಂತ ರಾಜೀವ ಗಾಂಧಿಯನ್ನು ಪ್ರಧಾನಿ ಮಾಡುವುದೇ ಮಹಾನ್ ಸಮಸ್ಯೆಯಾಗಿ ಕಾಣುತ್ತಿದೆ.

ಕಾಂಗ್ರೆಸ್ಸ್ ಪಕ್ಷದ ವೈಫಲ್ಯವನ್ನು ಜನತೆಗೆ ಮನದಟ್ಟು ಮಾಡಿಸುವಲ್ಲಿ ವಿರೋಧಪಕ್ಷಗಳು ಸಂಪೂರ್ಣವಾಗಿ ಸೋತಿವೆ. ಜನತೆಯನ್ನು ಜಾಗೃತ ಗೊಳಿಸಲು ಸಾಕಷ್ಟು ವಿಚಾರಗಳಿದ್ದಾಗ್ಯೂ ಕಾಂಗ್ರೆಸ್ಸಿನಂತೆ ಅಧಿಕಾರದ ಗದ್ದುಗೆಗೆ, ವೈಯಕ್ತಿಕ ಹಿತಾಸಕ್ತಿಗಳಿಗೆ ಕಚ್ಚಾಡುತ್ತಾ ಸಾಯುತ್ತಿದ್ದಾರೆ. ಕಾಂಗ್ರೆಸ್ಸಿಗಿರುವ ಬೂರ್ಜ್ವಾ ಸಿದ್ಧಾಂತಗಳಂತೆ ವಿರೋಧ ಪಕ್ಷಗಳ ಕಾರ್ಯಕ್ರಮಗಳಾಗಿರುವುದು ದುರಂತವಲ್ಲದೆ ಮತ್ತೇನು ?

ನಿರಂತರ ಹಬ್ಬುತ್ತಿರುವ ಕೋಮುಗಲಭೆಗಳು, ಮಹಿಳೆಯರ ಮೇಲಿನ ಅತ್ಯಾಚಾರಗಳು, ದಲಿತರ ಮೇಲಿನ ದೌರ್ಜನ್ಯಗಳು, ಸರ್ಕಾರದ ಗೋಲೀಬಾರುಗಳು ಜನತೆಯನ್ನು ಕಂಗೆಡಿಸಿವೆ. ಆಧುನಿಕ ಶಿಕ್ಷಣದ ಪ್ರತಿಫಲವಾಗಿ ಮೂಡಿಬಂದ ಹೊಸ ಜನಾಂಗ ಇಂಡಿಯಾದ ಸಮಸ್ಯೆಗಳಿಗೆ ಸೂಕ್ಷ್ಮವಾಗಿ ಪ್ರತಿಕ್ರಿಯಿಸುತ್ತ ಸಂಘಟನೆ ಹೋರಾಟಗಳನ್ನು ಪ್ರಾರಂಭಿಸಿದೆ. ನಮ್ಮಲ್ಲಿ ಲೋಹಿಯಾ, ಪೆರಿಯಾರ್ ಗಾಂಧಿ, ಮುಂತಾದವರ ವಿಚಾರಗಳಿದ್ದಾಗ್ಯೂ ಏನೇನೋ ಕೊರತೆ ಎನಿಸುವಷ್ಟರಮಟ್ಟಿಗೆ ಅವುಗಳ ವ್ಯಾಪ್ತಿಯಿದೆ. ಭಾರತದ ಶೋಷಿತರ ಸಮಸ್ಯೆಗಳಿಗೆ ವೈಜ್ಞಾನಿಕವಾದ, ಕ್ರಾಂತಿಕಾರಕವಾದ ಸಮಗ್ರ ಹೋರಾಟಕ್ಕೆ ಅಣಿಗೊಳಿಸುವ ಸಿದ್ಧಾಂತಗಳು ಅಪರೂಪ ಅಂದುಕೊಳ್ಳುತ್ತಿರುವಾಗಲೇ ಅಂಬೇಡ್ಕರ್‌ರವರ ವಿಚಾರಗಳು ಆ ಕೊರತೆಯನ್ನು ತುಂಬಲು ಸಮರ್ಥವಾಗಿರುವುದು ಈ ದೇಶ ಸಾಗಬೇಕಾಗಿರುವುದರ ಕಡೆಗೆ ಬೆರಳು ಮಾಡಿ ತೋರಿಸುತ್ತದೆ.

ಅಂಬೇಡ್ಕರ್ ನಂಬಿದ್ದರು : ಶೋಷಿತ ಜನಾಂಗದಿಂದ ಬರುವ ವಿದ್ಯಾವಂತ ಜನ ಶೋಷಿತರಿಗೆ ಮುಕ್ತಿ ದೊರಕಿಸುತ್ತಾರೆಂದು. ಅವರ ಕನಸನ್ನು ನನಸು ಮಾಡುವತ್ತ ಭಾರತದ ಶೋಷಿತ ಸಮೂಹದಿಂದ ಮೂಡಿಬಂದ ವಿದ್ಯಾವಂತರು ಅಂಬೇಡ್ಕರ್‌ರವರ ಅಪೂರ್ಣವಾದ ಹೋರಾಟವನ್ನು ಕೈಗೆತ್ತಿಕೊಂಡಿದ್ದಾರೆ. ಡಿ. 6. ಅಂಬೇಡ್ಕರ್‌ರವರು ಅಗಲಿದ ದಿನ. ಈ ದಿನ ಮಾಮೂಲೀ ಸ್ಮರಣೆಯ ದಿನವಾಗದೆ ಅವಮಾನದ ದಳ್ಳುರಿಯಲ್ಲಿ ಬೇಯುತ್ತಿರುವ ದಲಿತರ, ಮಹಿಳೆಯರ ಒಟ್ಟು ಶೋಷಿತರ ಬಿಡುಗಡೆಯ ಹೋರಾಟದ ಪ್ರತಿಜ್ಞೆಯ ಅರ್ಥಪೂರ್ಣ ಕ್ಷಣವಾಗಬೇಕು. *

---

## ಸೂಚನೆ

**'ಪಂಚಮ'ವು ಮಹಿಳೆಯರ ಸಮಸ್ಯೆಗಳನ್ನು ಕುರಿತಂತೆ ಪ್ರತಿ ಸಂಚಿಕೆಯಲ್ಲೂ ಒಂದು ಪುಟದಷ್ಟು ಸುದ್ದಿ, ವರದಿ ಇತ್ಯಾದಿಗಳನ್ನು ಪ್ರಕಟಿಸಲು ಉದ್ದೇಶಿಸಿದೆ. ಆದುದರಿಂದ ಎಲ್ಲಾ ಬರಹಗಾರರು ಸುದ್ದಿ, ಲೇಖನ, ವರದಿಗಳನ್ನು ಕಳುಹಿಸುವುದರ ಮೂಲಕ ಮಹಿಳೆಯರ ಸಮಸ್ಯೆಗಳಿಗೆ ಬೆಳಕು ಚೆಲ್ಲುವತ್ತ ಸಹಕರಿಸಬೇಕೆಂದು ಪಂಚಮವು ಆಶಿಸುತ್ತದೆ.**

**–ಸಂಪಾದಕ**

---

# ಹೆಮ್ಮರವಾಗಿ ಬೆಳೆಯುತ್ತಿರುವ ದೊಡ್ಡ ಭೂಮಾಲೀಕರು

**ಭೂ ಸುಧಾರಣ ಚರಿತ್ರೆ–7**
**—ಕ್ಷೀರಸಾಗರ**

ಹೆಣ್ಣು ಮಗಳು ಭೂಮಿಯಿಂದ ವಂಚಿತಳಾಗುವುದರ ಬಗ್ಗೆ ಹೇಮಲತಾ ಮಹಿಷಿಯವರು ಹೇಳಿರುವ ಒಂದು ಕೇಸು ಇದಕ್ಕೊಂದು ಉದಾಹರಣೆಯಾಗುವುದನ್ನು ನಾವುನೋಡಬಹುದು 'ಹೊನ್ನಾಳಿ ಟ್ರಿಬುನಲ್ ಮುಂದಿನ ಒಂದು ಕೇಸು ಹೀಗಿದೆ.

ಮುಸಲ್ಮಾನ್ ಹೆಣ್ಣು ಮಗಳೊಬ್ಬಳು ತನ್ನ ಗಂಡನನ್ನು ಕಳೆದುಕೊಂಡು ವಿಧವೆಯಾಗಿ, ತನ್ನ ನಾಲ್ಕು ಅಪ್ರಾಪ್ತ ವಯಸ್ಕ ಮಕ್ಕಳೊಂದಿಗೆ ಆಶ್ರಯಕೋರಿ ತಂದೆಯ ಮನೆ ಸೇರಿದಳು. ತಂದೆಯ ಊರಿನಲ್ಲೇ ಅವಳ ಗಂಡನಿಗೆ ಸೇರಿದ ಜಮೀನುಗಳೂ ಇದ್ದವು. ತಂದೆ ಜಮೀನುಗಳನ್ನು ನೋಡಿಕೊಳ್ಳುತ್ತಿದ್ದ. ಪಹಣಿಯ ವ್ಯವಸಾಯಗಾರನ ಕೋಷ್ಟಕದಲ್ಲಿ ತನ್ನ ಹೆಸರನ್ನೂ ಹೆಚ್ಚಿಸಿಕೊಂಡ, ಮಗಳಿಗೆ ತಿಳಿಯದಂತೆ ಟ್ರಿಬ್ಯೂನಲ್‌ಗೆ ಅರ್ಜಿಯನ್ನೂ ಗುಜರಾಯಿಸಿದ. ಟ್ರಿಬುನಲ್‌ನಿಂದ ನೋಟೀಸು ಬಂದು ಮಗಳು ತಂದೆಯನ್ನು ಪ್ರಶ್ನಿಸಿದಾಗ ಅವಳನ್ನು ಮಕ್ಕಳ ಸಹಿತ ಮನೆಯಿಂದ ಹೊರಗೆ ಹಾಕಿದ ತಂದೆಯೆನಿಸಿಕೊಂಡ ಭೂಪ. ಮುಂದೆ ಟ್ರಿಬ್ಯುನಲ್ ಕೂಡ ತಂದೆಗೇ ಅದಿಭೋಗದಾರನ ಹಕ್ಕನ್ನು ನೀಡಿತು. ಕಾರಣ ಕಾನೂನಿನ ಪ್ರಕಾರ ಅವನೇ ಗೇಣಿದಾರ.' ಹೀಗೆ ಹೆಣ್ಣುಮಕ್ಕಳನ್ನು ವಂಚಿಸುವ ಕಾನೂನಿನ ಜಾಲ ಅವರನ್ನು ಬೀದಿಗಿಳಿಸುವಂತೆ ಮಾಡುತ್ತದೆ. ಜೊತೆಗೆ ವಿಧವೆಯರಿಂದ ಗೇಣಿದಾರನಿಗೆ ಜಮೀನು ಕಿತ್ತುಕೊಡುವ74 ರ ತಿದ್ದುಪಡಿ ಕಾಯಿದೆ ಇವರ ತಲೆಯ ಮೇಲೆ ಕಲ್ಲು ಚಪ್ಪಡಿ ಎಳೆಯುವಪ್ರಯತ್ನವಲ್ಲದೆ ಬೇರೇನು ಅಲ್ಲ.

**ಹೆಮ್ಮರವಾಗಿ ಬೆಳೆಯುತ್ತಿರುವ ದೊಡ್ಡ ಭೂಮಾಲೀಕರು :**

17–10–82 ರಂದು ರೈತ ಚಳುವಳಿಯ ಬಗ್ಗೆ ಬೆಂಗಳೂರಿನ ಸಮಾಜವಾದಿ ಅಧ್ಯಯನ ಕೇಂದ್ರ ಏರ್ಪಡಿಸಿದ್ದ ಚರ್ಚೆಯಲ್ಲಿ ಕರ್ನಾಟಕ ರೈತ ಸಂಘದ ಕಾರ್ಯದರ್ಶಿ ಎನ್. ಡಿ. ಸುಂದರೇಶ್‌ರವರು 'ಕರ್ನಾಟಕ ಭೂ ಸುಧಾರಣೆ ಒಂದು ಪ್ರಗತಿ ಪರ ಹೆಜ್ಜೆ, ಯಾಕೆಂದರೆ ಭೂಮಿತಿ ತಂದದ್ದರಿಂದ ದೊಡ್ಡ ಭೂಮಾಲಿಕರು ಉಳಿದುಕೊಳ್ಳಲಿಲ್ಲ' ಎಂದು ಹೇಳಿದ ಮಾತುಗಳಾಗಲಿ ಸಾಗರದ ಗಣಪತಿಯಪ್ಪ ನವರು ಸರ್ಕಾರ ಭೂಮಿತಿ ತಂದ ಮೇಲೆ ದೊಡ್ಡ ಜಮಿನ್ದಾರರು ಉಳಿದು ಕೊಳ್ಳಲು ಹೇಗೆ ಸಾಧ್ಯ ಎಂದು ಕನ್ನಡ ಪ್ರಭದ ವಾಚಕರ ವಾಣಿಯಲ್ಲಿ ಬರೆದಿದು ಇವೆಲ್ಲ ಹಸಿಸುಳ್ಳುಗಳು ಎಂದು ನಾವು ಈಗಾಗಲೆ 74ರ ತಿದ್ದುಪಡಿ ಕಾಯಿದೆಯಲ್ಲಿ ಮಾಡಿರುವ ಕಳ್ಳಗಿಂಡಿಗಳಲ್ಲಿ ಇಣಕಿ ನೋಡಿದ್ದೇವೆ. ಇನ್ನೂ ಮುಖ್ಯವಾಗಿ ಹೆಚ್ಚಿನ ಹಿಡುವಳಿಗಳನ್ನು ಉಳಿಸಿಕೊಳ್ಳದೆ ತಮ್ಮ ಹಿತಾಸಕ್ತಿಗಳಿಗಾಗಿ ಕಾನೂನುಗಳನ್ನೇ ತಿದ್ದುಪಡಿ ಮಾಡಿಕೊಂಡಿರಬಹುದಾದ ಸಾಧ್ಯತೆಗಳನ್ನುನಾವು ನೋಡಬಹುದು.

ತಾತಗುಣಿ ಎಸ್ಟೇಟ್ ಕಾರ್ಮಿಕರದಿಟ್ಟ ಹೋರಾಟದ ನೋವಿನ ದಿಟ್ಟವಾದ ಕತೆ ಬಹಳ ಮಂದಿಗೆ ಗೊತ್ತಿದೆ. ಯಾಕೆಂದರೆ ಕರ್ನಾಟಕದ ಕೃಷಿ ಕಾರ್ಮಿಕರಲ್ಲಿ ಬಹಳ ದಿನಗಳವರೆಗೆ ಹೋರಾಟ ನಡೆಸಿದ ಚಾರಿತ್ರಿಕ ಮಹತ್ವ ಅದಕ್ಕಿದೆ. ಬೆಂಗಳೂರು ಜಿಲ್ಲೆಯ ದಕ್ಷಿಣ ತಾಲ್ಲೂಕು ಕನಕಪುರದ ರಸ್ತೆಯಲ್ಲಿ 800 ಎಕರೆ ಜಮೀನನ್ನು ಒಳಗೊಂಡ ಎಸ್ಟೇಟ್ ಒಂದಿದೆ. ಇದರ ಒಡೆಯರು ರೋರಿಚ್ ಮತ್ತು ದೇವಿಕಾ ರಾಣಿ ಎಂಬ ದಂಪತಿಗಳು. (ದೇವಿಕಾ ರಾಣಿ ರವೀಂದ್ರನಾಥ ಠಾಕೂರರ ಮೊಮ್ಮಗಳು, ರೋರಿಚ್ ಪ್ರಖ್ಯಾತ ಚಿತ್ರ ಕಲಾವಿದ) ಇಲ್ಲಿ ಕೆಲಸ ಮಾಡುವ ಸುಮಾರು 300 ಮಂದಿ ದಲಿತ ಕೃಷಿ ಕಾರ್ಮಿಕರು ಅತ್ಯಂತ ಕಡಿಮೆ ಕೂಲಿ ಪಡೆಯುತ್ತಿದ್ದಾರೆ. ಇವರು 120 ದಿನಗಳವರೆಗೆ ಎಸ್ಟೇಟ್ ಮುಂದೆ ಧರಣಿಕೂತು ಕೂಲಿ ಹೆಚ್ಚಿಸಿ ಹಾಗೂ ಈ ಬೆಳೆಯನ್ನು **plantation**ಗೆ ಒಳಪಡಿಸಿ ಅನ್ನುವ ಮುಖ್ಯ ಬೇಡಿಕೆಯನ್ನಿಟ್ಟು ಚಳುವಳಿ ನಡೆಸಿದರು. ಇಲ್ಲಿ ಬೆಳೆಯುತ್ತಿದ್ದುದು **Linoloe** ಎಂಬ ಒಂದು ರೀತಿಯ ಪುನಗು ಗಿಡಗಳು. ಇದರಿಂದ ಸುಗಂಧ ದ್ರವ್ಯಗಳನ್ನು ತಯಾರಿಸಲಾಗುತ್ತದೆ ಇದನ್ನು ಬೆಳೆಯುವುದೇ ಮಾರಾಟದ ದೃಷ್ಟಿಯಿಂದ. ಲಕ್ಷಾಂತರ ರೂಗಳ ಆದಾಯ ತಂದು ಕೊಡುವ ಈ ಎಸ್ಟೇಟಿನಲ್ಲಿ ಬೆವರು ಹರಿಸಿ ಇದನ್ನು ಬೆಳೆಯುವ ಕಾರ್ಮಿಕರಿಗೆ ಹಿಟ್ಟಿಗೂ ಸಾಲದಷ್ಟು ಕಡಿಮೆ ಕೂಲಿ ಕೊಡಲಾಗುತ್ತಿತ್ತು. ಇದನ್ನು ವಿರೋಧಿಸಿ ಬೆಂಗಳೂರಿಗೆ ಕಾಲುನಡಿಗೆ ಜಾತ ಮಾಡಿ ತಿಂಗಳಾನುಗಟ್ಟಲೆ ವಿದಾನ ಸೌಧದ ಎದುರು ಕುಟುಂಬ ಸಮೇತ ಧರಣಿ ಹೂಡಿದರು. ಆದರೂ ಕಾನೂನು ಇವರಿಗೆ ಯಾವ ರೀತಿಯಲ್ಲೂ ಅನುಕೂಲ ಮಾಡಿ ಕೊಡಲಿಲ್ಲ.

ಇಷ್ಟೆಲ್ಲ ಚಳುವಳಿ ಮಾಡಿದರೂ ಕಾನೂನು ಯಾವ ರೀತಿಯಲ್ಲಿ. ಇವರನ್ನು ವಂಚಿಸಿದೆ, ಭೂಸುಧಾರಣೆಯ ನೆಲೆಯಲ್ಲಿ ಹೇಗೆ ಈ ಮಹಾನ್ ದಂಪತಿಗಳು ತಮ್ಮ ಪಟ್ಟ ಭದ್ರ ಹಿತಾಸಕ್ತಿಗಳನ್ನು ಕಾಯ್ದುಕೊಂಡಿದ್ದಾರೆ ಅನ್ನುವುದನ್ನು ನೋಡುವ ಅಗತ್ಯ ಬಹಳವಿದೆ.

ಭೂಸುಧಾರಣೆಯ ಒಂದು ಮುಖ್ಯವಾದ ಉದ್ದೇಶ ಭೂಮಿತಿ ಹಾಕಿ ಹೆಚ್ಚುವರಿ ಬಂದ ಜಮೀನನ್ನು ದುಡಿಯುವವರಿಗೆ ಹಂಚುವುದು. ಈ ಕಾನೂನಿಗೆ ಒಳಪಡದೆ ಹೊರತಾಗಿರುವ ಕೆಲವು ರೀತಿಯ ಜಮೀನುಗಳಿವೆ ಅವೆಂದರೆ **plantations,** ಸರ್ಕಾರದ ಜಮೀನು ಮುಂತಾದವು. ಇವು ಮಿತಿಗೆ ಒಳ ಪಡುವುದಿಲ್ಲ ಎಷ್ಟು ಎಕರೆಗಳನ್ನಾದರೂ ಇಟ್ಟುಕೊಂಡು ವ್ಯವಸಾಯ ಮಾಡಬಹುದು **plantation** ಅನ್ನುವುದನ್ನು ಕಾನೂನು ಗುರ್ತಿಸುವುದು ಆ ಬೆಳೆ ಮಾರುಕಟ್ಟೆಯ ದೃಷ್ಟಿಯಿಂದ ಮಾತ್ರವೇ ಬೆಳೆಯುತ್ತಿದೆಯೋ ಅನ್ನುವುದನ್ನು. ಕುಟುಂಬದ ಅಥವ ಸ್ವಂತ ಬಳಕೆಯ ಕಾರಣಕ್ಕಾಗಿ ಬೆಳೆಯುವ ಬೆಳೆ **Plantation** ಆಗುವುದಿಲ್ಲ. ದೇವಿಕಾರಾಣಿ ಬೆಳೆಯುತ್ತಿರುವ ಲಿನೊಲಿಯೊ (ಪುನಗು) ಸಂಪೂರ್ಣವಾಗಿ ಮಾರುಕಟ್ಟೆಯ ದೃಷ್ಟಿಯಿಂದಲೇ ಬೆಳೆಸುತ್ತಿದ್ದರೂ ಅದನ್ನು **Plantation Act** ಗೆ ಸೇರಿಸದಿರುವುದು ಒಂದು ಆಶ್ಚರ್ಯ. ಜೊತೆಗೆ **Plantation Act** ಗೆ ಸೇರದೆಯೂ ಕೂಡ ಸುಮಾರು 800 ಎಕರೆಯಷ್ಟು ಜಮೀನನ್ನು ಇಟ್ಟು ಕೊಂಡಿರುವುದು ಕಾನೂನಿನ ವೈಪರೀತ್ಯ. ನಿಜ ಹೇಳಿದರೆ ನಿಮಗೆ ಆಶ್ಚರ್ಯವಾಗಬಹುದು ಕರ್ನಾಟಕದ ಭೂಸುಧಾರಣೆಯ ಕಾನೂನಿನಲ್ಲಿ ಇವರ ಹಿತ ಕಾಪಾಡುವುದಕ್ಕಾಗಿಯೇ ಒಂದು ಸಬ್ ಸೆಕ್ಷನ್ ಇದೇ ಅಧ್ಯಾಯ 8 ರ 107 ನೇ ವಿಭಾಗದ ಮಿತಿ ಅನ್ವಯವಾಗದಿರುವ ಕೆಲವು ಭೂಮಿಗಳು ಅನ್ನುವುದರ (I) (VI) ಸೆಕ್ಷನ್‌ನಲ್ಲಿ **Linaloe** ಬೆಳೆ ಸೇರಿದೆ. ನಂತರ ಮತ್ತೆ ಇದೇ ವಿಭಾಗದ (2)ನೇ ಸೆಕ್ಷನ್‌ನಲ್ಲಿ ಈ ಕಾನೂನು ಬಂನಂತರ **Linaloe** ಬೆಳೆಸಿದರೆ ಅವರಿಗೆಈ ಕಾನೂನಿನ ಲಾಭ ಸಿಕ್ಕುವುದಿಲ್ಲ.

(ಮುಂದುವರಿಯುವುದು)

# ನಿವೃತನಾಗಿ ಸತ್ತ ಮುದುಕ

ಇಲ್ಲೊಬ್ಬ ನಿವೃತ್ತನಾದ ಮುದುಕ ಸತ್ತ
ಅವನು ಹೇಗೆ ಬದುಕಿದ ನನಗೆ ಗೊತ್ತಿಲ್ಲ, ಬಹುಷಃ
ನನ್ನ ವಾರಗೆಯ ಅವನ ಮೊಮ್ಮಗನಂತೆ ಅವನು ಯೋಚಿಸಿದ್ದಿಲ್ಲ
ಹೆಣದ ಮೋರೆಯಲ್ಲೊಂಧು ತುಡುಗುನಗೆ ಇದ್ದಂತೆ ಮಾತ್ರ ಇದೆ.

ಪ್ರೀತಿ ಭಡ್ತಿ ಸಿಕ್ಕಾಗಲೂ ಅವನು ಖುಷಿ ಪಟ್ಟಿರಬಹುದು
ಅಥವಾ ಎರಡೆರಡು ವ್ಯಸನ ಹಚ್ಚಿಕೊಂಡು ನೊಂದಿರಬಹುದು
ಅವನ ಮೊಮ್ಮಗನಂತೆ ನನ್ನಂತೆ ಅಲ್ಲ, ಹೊಸ ಹೊಸ
ಒಂದೇ ಕೊರತೆಯಿಂದ ನರಳುವ ರೀತಿ.
ಅವನು ಕಣ್ಣೀರಿಟ್ಟು ಗೋಳು ಹೊಡೆಯುವುದರಲ್ಲಿ ತಗೊಳ್ಳುತ್ತಿದ್ದ ಮಜ ನೋಡಿದವ
ರ್‍ಯಾರಿಗೂ
ದುಖಃದಲ್ಲವನಿಗೆ ದುಃಖವಿತ್ತು ಎಂದು ಹೇಳಬರುವುದಿಲ್ಲ.
ಮುದುಕಿ ಹೆಂಡತಿಯ ಜೀವ ಹಿಂಡಿ ಹೇಗವನು ಚಪ್ಪರಿಸುತ್ತಿದ್ದ
ಶಾಂತಿ ವಯಸ್ಸಲ್ಲಿ ಪಾಪು ಹುಟ್ಟಿಸಿ ಆಚ್ಚರಿಕೊಟ್ಟ ಪೋಲಿ ಮುದುಕ
ಸೊಸೆಯನ್ನ ದಿನಕ್ಕೆಷ್ಟು ಸರಿ ನಾಚಿ ನೀರಾಹಿಸುತ್ತಿದ್ದ.
ಮಗನ ಹೃದಯ ಹಿಸುಕಿ ಹಿಸುಕಿ ಕೊಲ್ಲುತ್ತಿದ್ದ.

ಆ ಮಗ. ಮಧ್ಯವಯಸ್ಕ ಭ್ರಮೆ ನಿಂತಿದ್ದಾನೆ ಹೆಣದ ಮುಂದೆ
ತೊಳೆದ ಹೆಣದ ಅವರಣ–ಖರೆ, ಒಂಥರ ಸುಂದರವಾಗಿದೆ : ಒದ್ದೆ ನೆಲ
ಮೇಲೆ ಬಿಳಿಹುಡಿ ರಂಗೋಲಿ ಚಿತ್ತಾರ, ಮಧ್ಯೆ ಕೂತ ದುಂಡು ಹೂ ಹಳದಿ ಚೆಂಡು ಹೂ
ಹರಡಿದ ಒಣಹುಲ್ಲು, ದಿನಾ ನೋಡಸಿಗದ ವಾಹನ
ಕಡ್ಡಿಗಂಧದ ಹೊಗೆ ಹೊಳೆಯಿಸುವ ಕಿರಣಗಳು, ಚಂದ
ಆದರೆ ನಿಜಕ್ಕೂ ಸರ್ವರಿಗೂ ಭಂಗವಾಗಿದೆ, ಆದರೆ
ಇನ್ನೂ ಅಪಾರ ದುಃಖವಾಗಹುದಾದ್ದೆಂದರೆ ಆ ಮುದುಕ ಈಗೊಮ್ಮೆ
ಜೀವ ತಳೆದೆದ್ದು ಬಿಡಬಹುದಾದ್ದು.

ತಮಾಷೆಗೆ ನೋಡಿದರೆ ಎಲ್ಲರೂ ಆ ಭೀತಿಯಲ್ಲೇ ದುಃಖ ಗೊಂಡತಿದೆ.
ಆದರೆ, ನನ್ನ ಸಮಸ್ಯೆಯೆಂದರೆ ನನ್ನಂತೆ ಯೋಚಿಸದ ಅಜ್ಜ
ನಂಬಿದ ಏನನ್ನ ಸೂಳೀಮಗ ?
ಸುಖ ದುಃಖವನ್ನ ಕ್ರೌರ್ಯ ಪ್ರೇಮವನ್ನ ತುಂಟನಂತೆ
ಹೇಗವನು ಜಾರಿಸಿದ,
ನಕ್ಕ, ಅತ್ತ, ನಂಬಲಿಲ್ಲ ;
ಕಲ್ಲಿನಂತೆ; ಬಂಬಿನಂತೆ, ಎತ್ತಿನಂತೆ, ಹಸಿರು ವೃಕ್ಷದಂತೆ
ಇವ್ಯಾವುದಕ್ಕೂ ಇಲ್ಲದ ಅದು ನರಮನುಷ್ಯನಿಗೆ ಮಾತ್ರ ಯಾಕೆ—
ಅನ್ನೊ ಹಾಗೆ ಬದುಕಿದ, ಒಗೆದ.

ಎಸ್. ಮಂಜುನಾಥ

## ಮಹಿಳಾ ಒಕ್ಕೂಟದ ನಿರ್ಣಯಗಳು

ಅಕ್ಟೋಬರ್ 9 ಮತ್ತು 10ನೇ ತಾರೀಖುಗಳಂದು ಜರುಗಿದ ರಾಜ್ಯಮಟ್ಟದ ದಲಿತ ಮಹಿಳಾ ಒಕ್ಕೂಟವು ಮಹಿಳಾ ಸಂಘಟನೆಯನ್ನು ಅನಿವಾರ್ಯತೆಯನ್ನು ಗುರುತಿಸಿಕೊಳ್ಳುವತ್ತ ಪ್ರಥಮ ಹೆಜ್ಜೆಯನ್ನಿಟ್ಟದೆ. ಈ ಸಂದರ್ಭದಲ್ಲಿ ಕೆಳಕಂಡ ನಿರ್ಣಯಗಳನ್ನು ಒಕ್ಕೂಟವು ಕೈಗೊಂಡಿದೆ.

ದೇಶದಾದ್ಯಂತ ಮಹಿಳೆಯರ ಮೇಲೆ ನಡೆಯುತ್ತಿರುವ ಅತ್ಯಾಚಾರ, ದಬ್ಬಾಳಿಕೆಗಳನ್ನು ಸಭೆ ಖಂಡಿಸಿದೆ. ಮಹಿಳಾ ಕೃಷಿ ಕಾರ್ಮಿಕರ ವೇತನವನ್ನು ವೈಜ್ಞಾನಿಕವಾಗಿ ನಿಗಧಿಪಡಿಸಬೇಕು ಹಾಗು ಕೂಡಲೇ ಜಾರಿಗೊಳಿಸಬೇಕು. ಈ ಜವಾಬ್ದಾರಿಯನ್ನು ತಹಶೀಲ್ದಾರರ ಮೂಲಕ ಸರ್ಕಾರವೇ ಕಾರ್ಯರೂಪಕ್ಕೆ ತರಬೇಕು. ಮಹಿಳಾ ಕೃಷಿ ಕಾರ್ಮಿಕರಿಗೆ ಸರ್ಕಾರವೇ ಹೆರಿಗೆ ಭತ್ಯೆ ಕೊಡಬೇಕು. ಮಹಿಳಾ ಕೃಷಿ ಕಾರ್ಮಿಕರಿಗೆ ಕಡ್ಡಾಯವಾಗಿ 'ಜೀವವಿಮೆ' ಹಾಗು ಭವಿಷ್ಯನಿಧಿ' ಸೌಲಭ್ಯ ಕೊಡಬೇಕು. ದೇಶದಾದ್ಯಂತ ಮತ–ಧರ್ಮಗಳ ಅಂತರವಿಲ್ಲದೆ'ಸಿವಿಲ್‌ಕೋಡ್'ಜಾರಿಯಾಗಬೇಕು. ದೇಶದಾದ್ಯಂತ ಮಹಿಳೆಯರ ಮೇಲೆ ನಡೆಯುವ ಅತ್ಯಾಚಾರ, ದಬ್ಬಾಳಿಕೆಗಳನ್ನು ಪ್ರತಿವರ್ಷ ಅಧ್ಯಯನ ನಡೆಸಿ, ಸೂಕ್ತ ಸಲಹೆ ಮತ್ತು ಪರಿಹಾರ ನೀಡುವ ಶಾಶ್ವತ ಸಮಿತಿಯೊಂದನ್ನು ರಚಿಸಬೇಕು. ವರದಕ್ಷಿಣೆ ಸಾವಿಗೆ ಕಾರಣರಾದ ಅಪರಾಧಿಗಳಿಗೆ ಜಾಮೀನು ರಹಿತ ಬಂಧನಕ್ಕೆ ಗುರಿಪಡಿಸಿ, ಈಗಿರುವ ಶಿಕ್ಷಾವಧಿಯನ್ನು ಹೆಚ್ಚಿಸಬೇಕು. ಅತ್ಯಾಚಾರಗಳಿಗೆ ಸಂಬಂಧಪಟ್ಟ ಮೊಕದಮ್ಮೆಗಳಿಗೆ ಮಹಿಳಾ ನ್ಯಾಯಾದೀಶರನ್ನು ನೇಮಿಸಬೇಕು ಮತ್ತು ಅಪರಾಧಿಯು ಉನ್ನತ ನ್ಯಾಯಾಲಯಕ್ಕೆ ಹೋಗುವ ಅವಕಾಶವನ್ನು ರದ್ದು ಪಡಿಸಬೇಕು. ಮಹಿಳಾ ಜನಸಂಖ್ಯೆಗನುಗುಣವಾಗಿ ಎಲ್ಲಾ ಕ್ಷೇತ್ರಗಳಲ್ಲೂ ಸಮಾನ ಪ್ರಾತಿನಿಧ್ಯ ಕೊಡಬೇಕು. ದುಡಿಯುವ ಮಹಿಳೆಯರ ಬಗ್ಗೆ ಅಪಚಾರ–ಅಶ್ಲೀಲ ಮತ್ತು ವೈಯಕ್ತಿಕ ಸ್ವಾತಂತ್ರದ ಮೇಲೆ ಧಕ್ಕೆ ತರುವಂತಹ ಲೇಖನಗಳನ್ನು ಪ್ರಕಟಿಸುವ ಪತ್ರಿಕೆಗಳ ಲೈಸನ್ಸ್ ಅನ್ನು ರದ್ದುಗೊಳಿಸತಕ್ಕದ್ದು ಮತ್ತು ಮಹಿಳೆಯರ ಚಿತ್ರಗಳನ್ನು 'ಪ್ರಚಾರ ಮಾಧ್ಯಮ' ಹಾಗೂ 'ವಾಣಿಜ್ಯ ಮಾಧ್ಯಮ'ವಾಗಿ ಬಳಸುವುದನ್ನು ತಪ್ಪಿಸುವುದು ಮುಂತಾದ ಅಂಶಗಳು ಸೇರಿವೆ. ಈ ಸಭೆಯಲ್ಲಿ ದ. ಸಂ. ಸದ ರಾಜ್ಯ ಸಂಚಾಲಕರಾದ ಬಿ. ಕೃಷ್ಣಪ್ಪನವರು ಮಹಿಳಾ ಸಂಘಟನೆಯ ಅನಿವಾರ್ಯತೆಯನ್ನು ಕುರಿತು ಮಾತನಾಡಿದರು.

# ಅನ್ನಕ್ಕೆ ಮಣ್ಣು ಹಾಕಿದ ಗುಮಾಸ್ತ

ಸೋಮವಾರಪೇಟೆ ತಾಲ್ಲೂಕು ಕಛೇರಿಯ ಸ್ಟೈಫಂಡರಿಯ ಗುಮಾಸ್ತನೊಬ್ಬಜಾತಿ ದೃಢೀಕರಣ ಪತ್ರವನ್ನು ಕೊಡುವುದರಲ್ಲಿ ಲಂಚದ ಎಂಜಲಿನ ಆಸೆಯಿಂದ ಬಡಕುಟುಂಬದ ತರುಣನೊಬ್ಬನ ಅನ್ನಕ್ಕೆ ಮಣ್ಣು ಹಾಕಿದ ಘಟನೆ ವರದಿಯಾಗಿದೆ.

ಡಿ. ಕೆ. ಹಾಲೋಜಿ, ಸೋಮವಾರ ಪೇಟೆ ತಾಲ್ಲೂಕಿನ ಆತ್ತೂರು ನಲ್ಲೂರು ಗ್ರಾಮದ ಮರಾತ ಜಾತಿಗೆ ಸೇರಿದ ವಿದ್ಯಾವಂತ. ಕೊಡಗು ವಿಭಾಗದ ಅಂಚೆ ಮತ್ತು ತಂತಿ ಇಲಾಖೆಯಲ್ಲಿ ಅಂಚೆ ಸಹಾಯಕನ ಹುದ್ದೆಗೆ ಆಯ್ಕೆಯಾದರು. ಆಯ್ಕೆಯ ನಂತರ ಅಂಚೆ ಇಲಾಖೆಯವರು ಜಾತಿ ದೃಢೀಕರಣದ ಪತ್ರವನ್ನು ಹಾಜರುಪಡಿಸುವಂತೆ ಕೇಳಿ, 9-8-82 ನೇ ತಾರೀಖಿನ ಗಡುವನ್ನು ಕೊಟ್ಟರು. ಜಾತಿ ದೃಢೀಕರಣ ಪತ್ರಕ್ಕೆ ಹಾಲೋಜಿ 6-8-82 ರಂದೇ ಅರ್ಜಿ ಕೊಟ್ಟು ಕಾದರು. ಜಾತಿ ಸರ್ಟಿಫಿಕೇಟ್‌ಗಳನ್ನು ನೀಡುವ ಕೆಲಸ ಮಾಡುತ್ತಿದ್ದ ರಾಮಪ್ಪ ಎಂಬ ಗುಮಾಸ್ತ ಹಾಲೋಜಿಯಿಂದ ಹಣ ಪಡೆದು ಡಿಕ್ಲರೇಷನ್ ವೋತ್ ಫಾರಂಗೆ ಭರ್ತಿಮಾಡಿಸಿ ಶಿರಸ್ತೆದಾರರ ಸಹಿಗೆ ಕೊಟ್ಟರು. ಮತ್ತೆ ಹಾಲೋಜಿಯಿಂದ ಹಣ ಕೇಳಿದಾಗ ಕೊಡಲಿಲ್ಲ.

ದಿನಾಂಕ. 7-8-82 ರಂದು ಹಾಲೋಜಿ ಮಡಿಕೇರಿಯ ಅಂಚೆ ಮತ್ತು ತಂತಿ ವಿಭಾಗದ ಅಧಿಕಾರಿಗಳಿಗೆ ಜಾತಿದೃಢೀಕರಣ ಪತ್ರವನ್ನು ಹಾಜರುಪಡಿಸಿದಾಗ ಅದರಲ್ಲಿ ಪರಿಶೀಲನೆ ದೃಢೀಕರಣ ವಿಭಾಗವನ್ನು ಭರ್ತಿ ಮಾಡದ ಕಾರಣ ಅದು ತಿರಸ್ಕೃತವಾಯಿತು. ಮತ್ತೆ ಹಾಲೋಜಿಯೂ ಗ್ರಾಮಪಂಚಾಯ್ತಿ ಮತ್ತು ಗ್ರಾಮ ಲೆಕ್ಕಿಗರಿಂದ ಮಹಜರು ಮಾಡಿಸಿ, ರೆವಿನ್ಯೂ ಇನ್‌ಸ್ಪೆಕ್ಟರ್‌ರವರ ಮೂಲಕ ತಹಶೀಲ್ದಾರರಿಗೆ ಅರ್ಜಿ ಕೊಟ್ಟು ಆಗಿರುವ ತೊಂದರೆಯನ್ನು ಸರಿಪಡಿಸಲು ಕೇಳಿದರು. ಆಗ ರಾಮಪ್ಪ ಹಾಲೋಜಿಯಿಂದ 75 ರೂ ಲಂಚ ಕೇಳಿದ. ಹಾಲೋಜಿ ಹಣಕೊಡಲಿಲ್ಲ ಎಂಬ ಕಾರಣದಿಂದ "ನಿಮ್ಮ ಜಾತಿ ಪರಿಶಿಷ್ಟ ವರ್ಗಕ್ಕೆ ಸೇರುವುದಿಲ್ಲ"ವೆಂದು ಅರ್ಜಿಯನ್ನು ಮೂಲೆಗೆ ಹಾಕಿ ಕುಳಿತರು.

ಹಾಲೋಜಿ ತನಗೆ ಇದುವರೆಗೆ ಆಗಿರುವ ತೊಂದರೆಯನ್ನು ಅಂಚೆ ಕಛೇರಿಯವರಿಗೆ ಹೇಳಿಕೊಂಡಾಗ ಅವರು 11-8-82 ರ ಗಡುವನ್ನು ಪುನಃ ಕೊಟ್ಟರು. ಮರಾತ ಜಾತಿಯು ಪರಿಶಿಷ್ಟ ವರ್ಗಕ್ಕೆ ಸೇರಿಸಿದ್ದ ಸರ್ಕಾರಿ ದಾಖಲೆಗಳನ್ನು ಹಿಡಿದು ತಹಶೀಲ್ದಾರರ ಕಛೇರಿಗೆ ಹೋದಾಗ ತಹಶೀಲ್ದಾರ್‌ರವರು ಸಿಗಲಿಲ್ಲ.

ಅಷ್ಟೊತ್ತಿಗೆ ಅಂಚೆ ಇಲಾಖೆಯವರು ಕೊಟ್ಟ ಅವಧಿ ಮುಗಿದು ಹಾಲೋಜಿಯ ಆಯ್ಕೆ ರದ್ದಾಯಿತು. ಕೆಲಸ ಕಳೆದುಕೊಂಡ ದುಃಖದಿಂದ 21-8-82 ರಂದು ಹಾಲೋಜಿ ತಹಶೀಲ್ದಾರ್‌ರವನ್ನು ಖುದ್ದಾಗಿ ಕಂಡಾಗ ಆಗಿರುವ ತೊಂದರೆಗೆ ವಿಷಾಧಿಸುತ್ತ ಜಾತಿದೃಢೀಕರಣ ಪತ್ರವನ್ನು ಕೊಟ್ಟು ಅಂಚೆ ಇಲಾಖೆಯವರಿಗೆ ಈ ಬಗ್ಗೆ ತಿಳಿಸಿದರು. ಆದರೆ, ಕೆಲಸವೇನು ಸಿಗಲಿಲ್ಲ. ನಿರಾಶೆಯು ತುಂಬಿಕೊಂಡರೂ ಹಾಲೋಜಿ ತನಗಾದ ಅನ್ಯಾಯದ ಬಗ್ಗೆ ಜಿಲ್ಲಾಧಿಕಾರಿಗಳಿಗೆ ಮನವಿ ಮಾಡಿಕೊಂಡಾಗ ರಾಮಪ್ಪನ ಮೇಲೆ ಕ್ರಮ ಕೈಗೊಳ್ಳುವುದಾಗಿ ನೀಡಿದ ಭರವಸೆ ಇನ್ನೂ ಭರವಸೆಯಾಗಿಯೇ ಉಳಿದಿದೆ. ಹಾಲೋಜಿ ಬಾಗಿಲಿಗೆ ಬಂದ ಕೆಲಸ ಬಿಟ್ಟು ಉದ್ಯೋಗಕ್ಕೆ ಅಲೆಯಬೇಕಾಗಿದೆ. ನಮ್ಮ ದೇಶದ ಅಧಿಕಾರಿಗಳ ನೀಚತನಕ್ಕೆ ಇದಕ್ಕಿಂತ ಉದಾಹರಣೆ ಬೇಕೆ?

ವರದಿ : **ಗಣೇಶ್**
ವಿರಾಜಪೇಟೆ

---

# ಸಾಮೂಹಿಕ ಬಾವಿನೀರಿಗೆಹೋರಾಟ

ತುಮಕೂರು ಜಿಲ್ಲೆ ತುರುವೇಕೆರೆ ತಾಲ್ಲೂಕು ಕುರುಬರ ಹಳ್ಳಿ, ಸರ್ವೆ ನಂ 30, 31, 32 ಮತ್ತು 32-2ರಲ್ಲಿ ಸರ್ಕಾರದ ವತಿಯಿಂದ ಸಾರ್ವಜನಿಕ ನೀರಾವರಿ ಬಾವಿಯನ್ನು 1980-81 ರಲ್ಲಿ ತೆಗೆಸಿದ್ದು ಸರಿಯಷ್ಟೆ. ಇಲ್ಲಿ ಕೆ. ವೆಂಕಟರಾಮಯ್ಯ ಮತ್ತು ಆತನ ಚಿಕಪ್ಪಂದಿರು ಮಾತ್ರ ನೀರು ಬಳಸುತ್ತಿದ್ದು ಅದೇ ಸರ್ವೆನಂಬರಿಗೆ ಒಳಪಟ್ಟ ಮುದ್ದರಂಗಯ್ಯನ ಮಕ್ಕಳಿಗೆ ನೀರು ಕೊಡುತ್ತಿಲ್ಲ. ಈ ಬಾವಿಯನ್ನು ನಂಬಿಕೊಂಡು ಮುದ್ದರಂಗಯ್ಯನ ಮಕ್ಕಳು ಇಟ್ಟ ವೀಳೆದೆಲೆ ಅಂಬು ನಾಶವಾಗಿದೆ, ನಾಶವಾಗುತ್ತಿದೆ. ನೀರನ್ನು ಎಲ್ಲರಿಗೂ ಹಂಚಿ ಎಂದು ಅಲ್ಲಿಯ ದಲಿತರು ಎಲ್ಲಾ ಸಂಬಂಧಪಟ್ಟ ಅಧಿಕಾರಿಗಳಿಗೆ ತಾ|| 1-4-82 ರಿಂದ ಇದುವರೆವಿಗೂ ನೂರಾರು ಮನವಿಗಳನ್ನು ಸಲ್ಲಿಸಿ ಎಲ್ಲಾ ಸಂಬಂಧಪಟ್ಟ ರೆವಿನ್ಯೂ ಮತ್ತು ಪೋಲೀಸ್ ಅಧಿಕಾರಿಗಳ ಗಮನಕ್ಕೆ ತಂದ್ದಾರೆ.

ತಾ|| 14-5-82 ರಂದು ತುರುವೇಕೆರೆ ಬಿ.ಡಿ.ಓ. ಮತ್ತು ಸ್ಥಳೀಯ ಸೆಕ್ರೆಟರಿಯವರು ಸ್ಥಳಕ್ಕೆ ಭೇಟಿ ನೀಡಿ ನೀರು ಎಲ್ಲರೂ ಬಳಸುವಂತೆ ಆದೇಶ ನೀಡಿದ್ದರು. ಹಾಗೂ ತಾ|| 16-6-82 ರಂದು ಮತ್ತೆ ಬಿ.ಡಿ.ಓ. ಮತ್ತು ಪೋಲೀಸ್ ಸ್ಥಳಕ್ಕೆ ಭೇಟಿಕೊಟ್ಟು ನೀರು ಕೊಡದಿದ್ದ ಕಾರಣಕ್ಕೆ ಬಾವಿಯ ಮನೆಗೆ ಬೀಗ ಹಾಕಿಕೊಂಡು ಬಂದರೂ ಮತ್ತೆ ರಾಜಕೀಯ ಕುತಂತ್ರದಿಂದ ಬಾವಿ ಮನೆಯ ಬೀಗ ಕೆ. ವೆಂಕಟರಾಮಯ್ಯ ಮತ್ತು ಕುಟುಂಬದವರ ಕೈ ಸೇರಿ ಏಕ ಪಕ್ಷೀಯ ನೀರು ಬಳಸಿಕೊಳ್ಳುತ್ತಿದ್ದಾರೆ. ಮುದ್ದರಂಗಯ್ಯನವರ ಮಕ್ಕಳ ಜಮೀನಿಗೆ ಮಾತ್ರ ನೀರು ಕೂಟ್ಟೆಲ್ಲ ಬೆಳೆಯು ನಾಶವಾಗುತ್ತಿದೆ. ಸ್ಥಳೀಯ ಅಧಿಕಾರಿಗಳು ರಾಜಕೀಯ ಕೈವಾಡಕ್ಕೆ ಹೆದರಿ ಸಮಸ್ಯೆ ಬಗೆಹರಿಸಿಕೊಡದೆ ಕೈಕಟ್ಟೆ ಕೂತಿದ್ದಾರೆ. ರಾಜಕೀಯ ಕೈವಾಡದಿಂದ ದಲಿತರಲ್ಲಿ ಪರಸ್ಪರ ದ್ವೇಷ ಅಸೂಯೆಗಳು ಉಂಟಾಗಿರುವುದರಿಂದ ಇನ್ನು ಮುಂದಾದರೂ ಸಂಬಂಧಪಟ್ಟ ಅಧಿಕಾರಿಗಳು ಅತ್ತಗಮನಹರಿಸದಿದ್ದರೆ, ಅತಿ ಶೀಘ್ರದಲ್ಲಿ ಸ್ಥಳದಲ್ಲಿ ಹೃದಯ ವಿದ್ರಾವಕ ಘಟನೆ ನಡೆಯುವ ಸಂಭವವಿದೆಯೆಂದು ತಿಪಟೂರು ದ.ಸಂ. ಸವು ತಿಳಿಸಿದೆ.

ಪರಿಸ್ಥಿತಿ ಅರ್ಥ ಮಾಡಿಕೊಂಡು ನ್ಯಾಯಯುತವಾಗಿ ನೀರನ್ನು ಎಲ್ಲರಿಗೂ ಹಂಚಿಕೊಟ್ಟು ದಲಿತರಿಗೆ ರಕ್ಷಣೆ ಒದಗಿಸಿಕೊಡದಿದ್ದಕ್ಕೆ ಎರಡು ವರ್ಷದಿಂದಲೂ ನೊಂದ ಬೇಸತ್ತ ದಲಿತರು ತಿಪಟೂರು ವಿಭಾಗಧಿಕಾರಿಗಳ ಕಛೇರಿ ಮುಂದೆ ನ್ಯಾಯ ಮತ್ತು ರಕ್ಷಣೆಗಾಗಿ "ಧರಣಿ" ಕೂತಿದ್ದಾರೆ.

# ನಾ ಕಂಡ ಬೆಲ್ಚಿ, ಪಿಪ್ರಾ, ಕೆಸ್‌ತಾರ

ದಿನಾಂಕ : 9–11–82 ರಂದು ಮೂಡಣದಿಂದ ಮೂಡಿಬಂದ ಸೂರ್ಯ, ನನ್ನ ಮೈಯಿಂದ ಸೋರುತ್ತಿದ್ದ ರಕ್ತ ಹೀರುತ್ತಿದ್ದ. ಹೊಟ್ಟೆಯೊಳಗೆ ಹಸಿವು ನನ್ನ ತಿನ್ನುತ್ತಿತ್ತು. ಆಗತಾನೇ ಪ್ರಜ್ಞೆ ಬರುತ್ತಿದ್ದು, ಕೈ ಕಾಲು ಆಡಿಸಲು ಪ್ರಯತ್ನಿಸಿದೆ. ನನ್ನ ಸುತ್ತ ಬಿದ್ದಿದ್ದ ದೇಹಗಳ ರಾಶಿ ಆ ಮೈಗಳಿಂದ ಸೋರುತ್ತಿದ್ದ ರಕ್ತವನ್ನು ಭೂಮಿ ಮತ್ತು ಸೂರ್ಯ ಇಬ್ಬರೂ ಹಂಚಿಕೊಳ್ಳುತ್ತಿದ್ದರು. ನಮ್ಮನ್ನು ಸುತ್ತುಗಟ್ಟಿ ಸುಮಾರು ನೂರು ಇನ್ನೂರು, ಮುಗ್ಧ ಸವರ್ಣೀಯರು ಮಚ್ಚು, ದೊಣ್ಣೆಗಳನ್ನು ಹಿಡಿದು ಕುಂತಿದ್ದರು. ಗುಂಪಿನಿಂದ "ಈ ಸರ್ಕಾರ ಘೋಲಿಮಾದಿಗ ನನ್ಮಕ್ಕಳದೇ ಆಗೈತೆ ಬೆಂಕಿ ತರ್ರ್ಯಾಲಾ ಸುಟ್ಟು ಬಿಡನಾ" ಎಂಬ ಮಾತುಗಳು ಕೇಳಿಸುತ್ತಿದ್ದವು. ನೋವಿನಿಂದ ನರಳುತ್ತಿದ್ದ ದೇಹಗಳಿಗೆ ಆಗಾಗ ಸವರ್ಣೀಯರ ದೊಣ್ಣೆಗಳು ತಟ್ಟುತ್ತಿದ್ದವು. ಭೂಮಿಯಿಂದ ನಿಧಾನವಾಗಿ ಕೈಯನ್ನು ಮೇಲೆತ್ತಿದೆ. ಮುಷ್ಠಿಯಲ್ಲಿದ್ದ ಕೆಂಪುಮಣ್ಣು, ನೆನಪು ಮೂಢಿತು–ನಾನಾಗ ಗೂಳೂರು ಹೋಬಳಿ ಕಿತಕನಹಳ್ಳಿ ಸರ್ಕಾರಿ ಗೋಮಾಳದಲ್ಲಿ ಬಿದ್ದಿರುವುದನ್ನು.

ಬಂದ ಸೂರ್ಯ ಸುದ್ಧಿ ತಂದಿದ್ದ ಕೂಲಿ ಕೇಳಿದ ದಲಿತರನ್ನು ದೊಣ್ಣೆ ಮಚ್ಚುಗಳಿಂದ ಕತ್ತರಿಸಿ ಬೆಂಕಿ ಮೆದೆ ಒಟ್ಟಿ ಸುಟ್ಟದ್ದು, ದೇವ್ಲೋಲಿ, ಪಿಪ್ರಾ, ಸಾಧುಪುರ, ಕೆಸತಾರಗಳಲ್ಲಿ ದಲಿತರ ಕಗ್ಗೊಲೆಗಳ ಸರಮಾಲೆಗಳು, ಈಗ ಸೀನಿಮಾದ ಚಿತ್ರಗಳಂತೆ ಎಲ್ಲಾ ಕಗ್ಗೊಲೆಗಳೂ ನನ್ನ ಕಣ್ಣುಮುಂದೆ ಓಡಾಡಿದವು. ಆಗ ನಮ್ಮಗಳ ಮೈಯಿಂದ ಸೋರುತ್ತಿದ್ದ ರಕ್ತವನ್ನು ಹೆಪ್ಪುಗಿಸಿದ ಸೂರ್ಯ, ನೇರವಾಗಿ ನಮ್ಮ ಎದೆಯ ಮೇಲೆ ನಿಂತಿದ್ದ.

ಬೆಲ್ಚಿಯಲ್ಲಿ ದಲಿತರು ಹೆಚ್ಚು ಕೂಲಿ ಕೇಳಿದ್ದು ಎಷ್ಟು ತಪ್ಪೋ? ಕಿತಕನಹಳ್ಳಿ ಸರ್ಕಾರಿ ಗೋಮಾಳ

**ಅನುಭವದಗಣಿಯಿಂದ**

ಸರ್ವೆ ನಂಬರ್ 23, 24, 25, ಮತ್ತು 29 ರಲ್ಲಿ 5, 6, ವರ್ಷಗಳಿಂದ ಸಾಗು ಮಾಡುತ್ತಿದ್ದ ಗೂಳೂರು ದಲಿತರು ಭೂಮಿ ಕೇಳಿದ್ದು ಮತ್ತು ತಮ್ಮ ಬೆಳೆಯಲ್ಲಿ ಅಕ್ರಮವಾಗಿ ಇಟ್ಟಿದ್ದ ನೀಲಗಿರಿ ಗಿಡ ಕಿತ್ತಿದ್ದು ಅಷ್ಟೆ ತಪ್ಪು. ಬೆಲ್ಚಿಯಲ್ಲಿ ದಲಿತರ ತಪ್ಪಿಗಾಗಿ ಸವರ್ಣೀಯರು ಅವರ ಪ್ರಾಣವನ್ನು ಬಲಿ ತೆಗೆದುಕೊಂಡರು. ಇಲ್ಲಿ ಪ್ರಾಣಗಳನ್ನು ಮಾತ್ರ ಬಿಟ್ಟಿದ್ದರು. ಸುದ್ದಿ ತಿಳಿದ ಸುತ್ತಮುತ್ತಲಿನ ಹಳ್ಳಿಯ ದಲಿತರು ದೊಣ್ಣೆಗಳನ್ನು ಹಿಡಿದು ಓಡೋಡಿ ಬಂದರು. ಇಡೀ ಗೋಮಾಳ ತುಂಬಾ ಸಾವಿರಾರು ಜನ ಸೇರಿ ಕುರುಕ್ಷೇತ್ರವಾಯಿತು. ರಾಜಕಾರಿಣಿಗಳ ಕೈಗೊಂಬೆಯಾದ ಪೋಲಿಸು ಉದ್ದೇಶವಾಗಿಯೇ ತಡವಾಗಿ ಬಂದು ಗಾಯಗೊಂಡ ದಲಿತರನ್ನು ಹೀಯಾಳಿಸುತ್ತ, ತುಮಕೂರು ಸರ್ಕಾರಿ ಆಸ್ಪತ್ರೆಗೆ ಸೇರಿಸಿದರು. ರಾಜಕಾರಿಣಿಗಳ ಕುತಂತ್ರ ಅಧಿಕಾರಿಗಳ ನಿರ್ಲಕ್ಷ್ಯತೆಯಿಂದ ವಿಷಪೂರಿತ ಮುಗ್ಧ ಸವರ್ಣೀಯರು ದಲಿತರಿಗೆ ಭೂಮಿ ದಕ್ಕಬಾರದೆಂದು ಈ ರಾಕ್ಷಸಿ ಕೃತ್ಯವನ್ನು ಕೈಗೊಂಡಿದ್ದರು. ದಲಿತರು ಮಾತ್ರ ಸರ್ಕಾರದ ಕಾನೂನು ನಂಬಿ ಭೂಮಿ ಪಡೆಯುವ ಕನಸು ಕಾಣುತ್ತಿದ್ಧಾರೆ. ನನ್ನ ಕಾಲು ಮುರಿದು ಮೈಯೆಲ್ಲಾ ಗಾಯಗಳಾದವು. ದಲಿತರಿಗಾಗಿ ಭೂಮಿ ಗೆಲ್ಲುವ ಛಲದಲ್ಲಿ ನೋವಿರಲಿಲ್ಲ. ಈಗ ಆಸ್ಪತ್ರೆಯಲ್ಲಿ ಇದ್ದೇನೆ. ಆದರೆ ಹೃದಯಕ್ಕೆ ಚೂರಿಗಳು ಬಿದ್ದು ಜೀವಹೋಗಿದೆ, ದೇಹ ಇನ್ನು ಬದುಕಿದೆ.

—ಬಂದಕುಂಟೆ ನಾಗರಾಜು

# ರೋಗಗ್ರಸ್ಥ ಸರ್ಕಾರಕ್ಕೆ ಕೈಗನ್ನಡಿ!

ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಹಲವು ಗ್ರಾಮಗಳಲ್ಲಿ ವಿಶೇಷವಾಗಿ ಹಂದಿಗೋಡು ಗ್ರಾಮದಲ್ಲಿ ವಿಚಿತ್ರರೋಗವೊಂದು ಕಾಣಿಸಿಕೊಂಡು ಬಡಜನರಿಗೆ ಶಾಪವಾಗಿ ಪರಿಣಮಿಸಿದೆ. ಐದು ವರ್ಷಗಳ ಹಿಂದೆ ತಜ್ಞರ ತಂಡವೊಂದು ಬಂದು ತಪಾಸನೆ ನಡೆಸಿ ಪರಿಹಾರ ಸೂಚಿಸಿದ್ದರೂ ಪರಿಹಾರ ತಲುಪಿದಂತೆ ಕಂಡುಬಂದಿಲ್ಲ.

ಇಲ್ಲಿನ 19 ದಲಿತ ಕುಟುಂಬಗಳ ಮಕ್ಕಳು, ದೊಡ್ಡವರೆಲ್ಲ ವಿಕಲಾಂಗರಾಗಿ ನನರಳುತ್ತಿದ್ದಾರೆ. ಸರ್ಕಾರಿ ಆಸ್ಪತ್ರೆಗೆ ಹೋದರೆ ಔಷದಿ ಇಲ್ಲವೆಂತಲೂ, ಅಂಗವಿಕಲರ ಪೆನ್‌ಷನ್ ಕೇಳಿದರೆ ಅಧಿಕಾರಿಗಳು ಸಹಕರಿಸುತ್ತಿಲ್ಲವೆಂತಲೂ ತಿಳಿದು ಬಂದಿದ್ದು, ಇದು ಸರ್ಕಾರದ ರೋಗಗ್ರಸ್ಥ ವ್ಯವಸ್ಥೆಗೆ ಕೈಗನ್ನಡಿಯಾಗಿದೆ.

ಹಂದಿಗೋಡು ಗ್ರಾಮದ ಗುತ್ಯಪ್ಪನ ಮನೆಯಲ್ಲಿ ಮಂಜಪ್ಪ ಎಂಬ 8 ವರ್ಷದ ಮಗು ಈ ರೋಗಕ್ಕೆ ಬಲಿಯಾಗಿ ನಡೆಯಲು ಆಗುವುದಿಲ್ಲ. ಅದೇ ಗ್ರಾಮದ ದುರ್ಗಪ್ಪನ ಮನೆಯ ಆರೂ ಜನರು ಅಂಗವಿಕಲರಾಗಿದ್ದಾರೆ. ರೋಗಕ್ಕೆ ಸಿಕ್ಕಿ ನರಳುತ್ತಿರುವ ಹನ್ನೆರಡು ವರ್ಷದ ಗೌರಿ, ಹತ್ತು ವರ್ಷದ ಸರೋಜ, ಮುವ್ವತ್ತು ವರ್ಷದ ಜಟ್ಟಿಮ್ಮ ನಲ್ವತ್ತು ವರ್ಷದ ನಾರಾಯಣ ಇವರೆಲ್ಲ ಹೇಳುವಂತೆ ಹೋರಾಟ, ನಡೆಸಿದರೂ ಅಧಿಕಾರಿಗಳು ನಿರ್ಲಕ್ಷ್ಯದಿಂದ ಇದ್ದಾರೆ. ಇದೇ ರೀತಿಯಲ್ಲಿ ಈ ಭಾಗದ ಮಂತ್ರಿ, ಶಾಸಕರು ಸನ್ಮಾನ ಸಮಾರಂಭಗಳಲ್ಲಿ ಮುಳುರಿ ಹೋಗಿ ತಾವು ನಿಜವಾದ ಕತ್ರೆಗಳೆಂದು ತೋರಿಸಿಕೊಳ್ಳುತ್ತಿದ್ದಾರೆ.

ಅಸಹಾಯಕತೆಯಿಂದ ಆಕಾಶ ನೋಡುತ್ತಿರುವ ಜನರಲ್ಲಿ ಭರವಸೆ ಮೂಡಿಸಲು ದ.ಸಂ. ಸವ ಪ್ರಯತ್ನಿಸಿದರೆ ಎಚ್ಚರವಹಿಸಬೇಕಾದ ಅಧಿಕಾರಿಗಳ ಬುದ್ಧಿಯೇ ವಿಕಲಾಂಗವಾಗಿ ಸರ್ಕಾರದ ಪೂರ್ಣ ವೈಫಲ್ಯಕ್ಕೆ ಕನ್ನಡಿ ಎನ್ನುವಂತೆ ಕಾಣುತ್ತಿದೆ.

## ಬೇಕಾಗಿದ್ದಾರೆ

ಮಂಡ್ಯನಗರದ ಬನ್ನೂರು ರಸ್ತೆಯಲ್ಲಿರುವ ಚಾಮುಂಡೇಶ್ವರಿ ದೇವಸ್ಥಾನದ ಎದುರಿಗಿರುವ ಬಾಲಕರ ಸರ್ಕಾರಿ ಕಾಲೇಜಿನ ವಿದ್ಯಾರ್ಥಿ ನಿಲಯಕ್ಕೆ ಕೂಡಲೇ ನಾಲ್ಕು ಮಂದಿ ನುರಿತ ಅಡಿಗೆಯವರು ಬೇಕಾಗಿದ್ದಾರೆ. ಇಚ್ಛೆಯುಳ್ಳವರು ವಿಧ್ಯಾರ್ಥಿನಿಲಯಕ್ಕೆ ಬಂದು, ನಿಲಯಪಾಲಕರನ್ನು ಕಾಣಬಹುದು. ಅರ್ಹತೆಯ ಮೇಲೆ ಸಂಬಳವನ್ನು ನೀಡಲಾಗುವುದು.

ನಿಲಯ ಪಾಲಕರು,
ಬಾಲಕರ ಸರ್ಕಾರಿ ಕಾಲೇಜು,
ವಿದ್ಯಾರ್ಥಿ ನಿಲಯ
ಬನ್ನೂರು ರಸ್ತೆ, ಮಂಡ್ಯ.

# ಭಾರತದ ಅಪೂರ್ಣ ಕ್ರಾಂತಿ:

"ರಾಷ್ಟ್ರೀಯ ನಾಯಕರು ಗಣರಾಜ್ಯಕ್ಕೆ ಕೊಟ್ಟ ರಾಜಕೀಯ ಪ್ರಜಾಪ್ರಭುತ್ವದ ಚೌಕಟ್ಟು ಬಹುಮಟ್ಟಿಗೆ ಅದರ ಉಪಧಿಕಾರವಾಗಿದೆ. ಭೌದ್ಧಿಕ ಮತ್ತು ಕೈಗಾರಿಕಾ ಕ್ರಾಂತಿಯಾಗದೆ ಭಾರತೀಯ ಸಮಾಜದ ಯಾವುದೇ ಬಗೆಯ ನೈಜ ಪರಿವರ್ತನೆ ಸಾಧ್ಯವಿಲ್ಲ. ಇದು ಅಂಬೇಡ್ಕರ್ ಅವರಿಗೆ ಚೆನ್ನಾಗಿ ಗೊತ್ತಿತ್ತು. ಆದ್ದರಿಂದಲೇ ಅವರು ಇವೆರಡನ್ನು ಪ್ರತಿಪಾದಿಸಿದರು. ಹಾಗೆ ಮಾಡುವುದರಿಂದಾಗಿ ಅವರು ಕೇವಲ ಅಸ್ಪೃಶ್ಯರ ನಾಯಕರಾಗುವುದಕ್ಕಿಂತ ಹೆಚ್ಚಾಗಿ ಭಾರತದ ಆಧುನೀಕರಣದ ಶಕ್ತಿಗಳ ನಾಯಕರಾದರು".

.........ಆದ್ದರಿಂದ ಅವರಿಗೆ ಸಾಮಾಜಿಕ ಕ್ರಾಂತಿಕಾರಿ ಫೂಲೆ ರಾಜಕೀಯ ಪ್ರತಿಗಾಮಿಯಾಗಿ ಕಂಡರು. ಈ ಅಭಿಪ್ರಾಯ ಭಾರತದಲ್ಲಿ ರಾಷ್ಟ್ರೀಯ ಚಳವಳಿ ಬೆಳೆದಂತೆಲ್ಲಾ ಹೆಚ್ಚಾಯಿತು ; ಆದ್ದರಿಂದಲೇ ಆಧುನಿಕ ಭಾರತದ ಇತಿಹಾಸ ಪುಸ್ತಕಗಳಲ್ಲಿ ಫೂಲೆ ಅವರ ಹೆಸರು ಬರುವುದು ಬಹಳ ಅಪರೂಪ. ಆಧುನಿಕ ಭಾರತದ ಒಂದು ದೊಡ್ಡ ದುರಂತಕ್ಕೆ ಕಾರಣವಾದ ರಾಜಕೀಯ ಮತ್ತು ಸಾಮಾಜಿಕ ಕ್ರಾಂತಿಯ ಕಂದರವನ್ನು ಹೋಗಲಾಡಿಸುವುದು ಅಗತ್ಯವಾಗಿದೆ. ಈ ಕಾರ್ಯ ನೆರವೇರಿದ ಮೇಲೆ ಫೂಲೆ ಅವರ ಗುಣಾತ್ಮಕ ಸಾಧನೆ ಖಚಿತವಾಗುತ್ತದೆ. ಹೆಚ್ಚು ಪ್ರಚಾರವಾಗಿರುವ ಅವರ ಕಿರಿಯ ಸಮಕಾಲೀನರಾಥ ವಿ.ಎಸ್. ಚಿಪಲೂಂಕರ್ (೧೮೫೦–೧೮೮೨) ಮತ್ತು ಬಾಲಗಂಗಾಧರ ತಿಲಕ್ (೧೮೫೬–೧೯೨೦) ಇವರುಗಳಿಗಿಂತ ಯಾವ ವಿಧದಲ್ಲಿಯೂ ಅವರು ಕಡಿಮೆಯಲ್ಲ ಎಂಬುದು ತಿಳಿಯುತ್ತದೆ.

೨

ಫೂಲೆ ಅವರು ಮರಣವಾದ ನಂತರ, ನಾಲ್ಕು ದಶಕಗಳ ಅವಧಿಯಲ್ಲಿ ಶೂದ್ರ ಜಾತಿಗಳ ಸಮಸ್ಯೆಗಳನ್ನೂ ಆಶೋತ್ತರಗಳನ್ನೂ ಅರ್ಥಮಾಡಿಕೊಳ್ಳುವ ಯಾವ ಬೆಳವಣಿಗೆಯೂ ಆಗಲಿಲ್ಲ. ಮೇಲುಜಾತಿಯ ಹಿಂದೂಗಳ ಕೈಯಲ್ಲೆ ರಾಷ್ಟ್ರೀಯ ಚಳವಳಿ ಸಾಗುತ್ತಿತ್ತು. ಆಗ ತಾನೆ ಮೇಲೇರುತ್ತಿದ್ದ ಭಾರತೀಯ ಮುಸ್ಲಿಮರಿಂದ ಅವರಿಗೆ ಸವಾಲು ಬರಲು ಸುರುವಾಯಿತು. ಸಾವಿರದ ಒಂಬೈನೂರ ಇಪ್ಪತ್ತು ಮತ್ತು ಮೂವತ್ತರ ದಶಕಗಳಲ್ಲಿ ಭಾರತದ ರಾಜಕೀಯವು ಮೇಲುಜಾತಿಯ ಚೌಕಟ್ಟಿನಿಂದ ಹೊರಬರಲು ಪ್ರಾರಂಭವಾಯಿತು. ಜಾಗತಿಕ ಯುದ್ಧದ ನಂತರ ಭಾರತೀಯ ಸಾರ್ವಜನಿಕ ಜೀವನದಲ್ಲಿ ಹೊಸಶಕ್ತಿಗಳು ಕಂಡುಬಂದವು. ವಿದ್ಯಾವಂತ ನಗರವಾಸಿಗಳ ಕೆಲವು ಗುಂಪುಗಳ ಮೇಲೆ ರಷ್ಯಾದ ಮಹಾಕ್ರಾಂತಿಯ ಸಿದ್ಧಾಂತವು ಸಾಕಷ್ಟು ಪ್ರಭಾವವನ್ನುಂಟುಮಾಡಲು ಶುರುವಾಯಿತು. ಆದರೆ ಗಾಂಧೀಜಿ ನೇತೃತ್ವದಲ್ಲಿ ರಾಷ್ಟ್ರೀಯ ಚಳವಳಿ ತನ್ನ ತೆಕ್ಕೆಗೆ ಜನಸಾಮಾನ್ಯರನ್ನು ಎಳೆದುಕೊಂಡು ತುಂಬ ವ್ಯಾಪಕವಾಯಿತೆಂಬುದು ಅತ್ಯಂತ ಗಮನಾರ್ಹ ಸಂಗತಿ.

ಅಸ್ಪೃಶ್ಯರ ದುಸ್ಥಿತಿಯಿಂದ ಗಾಂಧೀಜಿ ತೀರಾ ಬೇಸತ್ತಿದ್ದರು ; ಆದರೆ ಅವರ ದೃಷ್ಟಿ ಅಸ್ಪೃಶ್ಯತೆಯನ್ನು ತ್ಯಜಿಸುವಂತೆ ಮೇಲು ಜಾತಿಯ ಹಿಂದೂಗಳನ್ನು ಒತ್ತಾಯಪಡಿಸುವುದಾಗಿತ್ತು. ಅವರು ಹಿಂದೂ ಜಾತಿ ಪದ್ಧತಿಯನ್ನು ತಿರಸ್ಕರಿಸಲಿಲ್ಲ : ಏಕೆಂದರೆ ಅದು ಸಾಮಾಜಿಕ ಸೌಹಾರ್ದತೆಗೆ ಅಗತ್ಯವೆಂದು ಭಾವಿಸಿದರು; ಆದರೆ "ಅಸ್ಪೃಶ್ಯತೆ ಹಿಂದೂ ಧರ್ಮದ ಕಳಂಕ" ಎಂದು ಪರಿಗಣಿಸಿದರು. 'ಯಂಗ್ ಇಂಡಿಯಾ' ಪತ್ರಿಕೆಯಲ್ಲಿ (೨೩–೪–೧೯೨೫) "ಅಸ್ಪೃಶ್ಯನನ್ನು ಶೂದ್ರನಂತೆ ಕಾಣಬೇಕು" ಎಂದು ಬರೆದರು; ಏಕೆಂದರೆ "ಐದನೆಯ ವರ್ಣಕ್ಕೆ ಅವಕಾಶವಿಲ್ಲ". ಈ ವಿಷಯದಲ್ಲಿಯೂ ಅವರು ತಮ್ಮ ರಾಜಕೀಯ ನಾಯಕತ್ವದ ಪ್ರಧಾನ ದೃಷ್ಟಿಯಂತೆ ದೊಡ್ಡ ಮೈತ್ರಿ ಸಾಧಕರಾದರು. ಜಾತಿ ಪದ್ಧತಿಯನ್ನು ನಿರ್ಮೂಲನ ಮಾಡಿದ ಹೊರತೂ ಅಸ್ಪೃಶ್ಯತೆ ಹೋಗುವುದಿಲ್ಲವೆಂಬುದನ್ನು ನಂಬಲು ಅವರು ನಿರಾಕರಿಸಿದರು. 'ಗುಲಾಮಗಿರಿ' ಪ್ರಣಾಳಿಕೆಯಲ್ಲಿ ಅದೇ ಅಂಶವನ್ನು ಫೂಲೆ ಅವರು ಹೇಳಿದ್ದರು. ಅದನ್ನು ಮತ್ತೆ ಒತ್ತಿ ಹೇಳುವ ವೀರ ಪ್ರತಿನಿಧಿ ಬೇಕಾಗಿತ್ತು. ಅವರೇ ಭೀಮರಾವ್ ರಾಮ್‌ಜಿ ಅಂಬೇಡ್ಕರ್ (೧೮೯೧–೧೯೫೬) ಈ ಇಬ್ಬರು ನಾಯಕರಿಗೂ ಇದ್ದ ಸೈದ್ಧಾಂತಿಕ ರಕ್ತ ಸಂಬಂಧ ವರ್ಣನೆಗೆ ಮೀರಿದ್ದು. ಆ ಸಂಬಂಧವನ್ನು ತಮ್ಮ 'ಶೂದ್ರರು ಯಾರು?' (**Who were tbe Shudras?**) ಎಂಬ ಮಹತ್ವಪೂರ್ಣ ಕೃತಿಯನ್ನು ಫೂಲೆ ಅವರಿಗೆ ಸಮರ್ಪಿಸಿ ಅಂಬೇಡ್ಕರ್ ಸಾಬೀತು ಪಡಿಸಿದರು. ತಮ್ಮ ಅರ್ಪಣೆಯಲ್ಲಿ ಅಂಬೇಡ್ಕರ್ ಅವರು ಫೂಲೆಯವರ ಬಗ್ಗೆ ಬರೆದರು. "ಆಧುನಿಕ ಭಾರತದ ಅತ್ಯಂತ ಮಹಿಮಾನ್ವಿತ ಶೂದ್ರ ಆತ. ಕೆಳ ಜಾತಿಯ ಹಿಂದೂಗಳು ಮೇಲು ಜಾತಿಯವರಿಗೆ ಗುಲಾಮರಾಗಿರುವುದನ್ನು ಅರಿವು ಮಾಡಿಕೊಟ್ಟರು. ಇಂಡಿಯಾದ ಮಟ್ಟಿಗೆ, ಸಾಮಾಜಿಕ ಪ್ರಜಾಪ್ರಭುತ್ವವು ಪರಾಡಳಿತದಿಂದ ಸ್ವಾತಂತ್ರ್ಯ ಪಡೆಯುವದಕ್ಕಿಂತ ಹೆಚ್ಚು ಪ್ರಮುಖವಾದದ್ದು ಎಂಬ ಸಂದೇಶವನ್ನು ಸಾರಿದರು."

ಅಂಬೇಡ್ಕರ್ ಮಹರ್ ಜಾತಿಯವರು, ಮಹರ್ ಜಾತಿ ಮಹಾರಾಷ್ಟ್ರದ ಅಸ್ಪೃಶ್ಯಜಾತಿಯಲ್ಲೆ ದೊಡ್ಡದು. ಇಡೀ ಜನಸಂಖ್ಯೆಯ ಶೇಕಡ ೧೦ರಷ್ಟು ಮಹರ್ ಜಾತಿಯವರೇ ಇದ್ದಾರೆ. ಆಜನ್ಮ ಅಸ್ಪೃಶ್ಯನೆಂದರೆ ಏನೆಂದು ಅಂಬೇಡ್ಕರ್ ಅವರಿಗೆ ಚೆನ್ನಾಗಿ ಗೊತ್ತಿತ್ತು. "ಬೀದಿಗಳನ್ನು ಸ್ಮಶಾನ ಭೂಮಿಯನ್ನು ಸ್ವಚ್ಛ ಗೊಳಿಸುವುದು. ಸುದ್ದಿ ಕೊಂಡೊಯ್ಯುವುದು, ಸತ್ತದನಗಳನ್ನು ಹೊತ್ತು ಸಾಗಿಸುವುದು, ಹಾಗೂ ಇಂಥವೇ ಕೀಳು ಕೆಲಸಗಳನ್ನು ಅವರು ಮಾಡಬೇಕಿತ್ತು". ಅಂಬೇಡ್ಕರ್ ಅವರ ತಂದೆ ಮತ್ತು ತಾತ ಸೈನ್ಯದಲ್ಲಿ ಸೇವೆ ಸಲ್ಲಿಸಿದ್ದರು. ಈ ಅವಕಾಶ 19ನೇ ಶತಮಾನದಲ್ಲಿ ಬ್ರಿಟಿಷರ ಆಳ್ವಿಕೆಯಿಂದ ಸಾಧ್ಯವಾಗಿತ್ತು. ಅವರು ಅದೃಷ್ಟ ಶಾಲಿಗಳು. ಅವರ ಬುದ್ಧಿಶಕ್ತಿಗೆ ಬಹು ಬೇಗ ಮನ್ನಣೆ ದೊರಕಿತು. ಬರೋಡಾದ ಗಾಯಕ ವಾಡರ ದೂರದರ್ಶಿತ್ವದಿಂದ ಅವರು ಉನ್ನತ ವ್ಯಾಸಂಗಕ್ಕಾಗಿ ವಿದೇಶಕ್ಕೆ ಹೋಗಲು ಸಾಧ್ಯವಾಯಿತು. ಅವರು ಕೊಲಂಬಿಯಾ ವಿಶ್ವವಿದ್ಯಾನಿಲಯದಿಂದ ಪಿ. ಎಚ್.ಡಿ. ಪದವಿಗಳಿಸಿ 1923ಕ್ಕೆ ಸ್ವದೇಶಕ್ಕೆ ಮರಳಿ ಬಂದರು. ಲಂಡನ್‌ನ ಗ್ರೇಸ್ ಇನ್‌ಗೆ ಪ್ರವೇಶಪಡೆದು ವಕೀಲ ವೃತ್ತಿಗೆ ಅರ್ಹರಾದರು. ತಮ್ಮ ವೈಯಕ್ತಿಕ ಸಾಧನೆಗಳಿಂದ ಉಬ್ಬಿ ಹೋಗದೆ, ತಮ್ಮ ಸಾಮಾಜಿಕ ಪ್ರಜ್ಞೆ[illegible] ಮಂಕುಕವಿಸದೆ, ಎಲ್ಲಾ ಅಸ್ಪೃಶ್ಯರನ್ನೂ ಅವ[illegible] ಮೂಲಭೂತ ಮಾನವ ಹಕ್ಕುಗಳನ್ನು ಪಡೆಯಲು ಪ್ರೇರೇಪಿಸಿ ಸಂಘಟನೆ ಮಾಡಲು ಪ್ರಾರಂಭಿಸಿದರು.

1924ರಲ್ಲಿ ಸ್ಥಾಪಿಸಿದ ಬಹಿಷ್ಕೃತ ಹಿತಕಾರಿ[illegible] ಸಭಾ ಇಂದ ಹಿಡಿದು ಬೌದ್ಧಧರ್ಮಕ್ಕೆ ಅವರ ಪರಿವರ್ತನೆ, ರಿಪಬ್ಲಿಕನ್ ಪಕ್ಷದ ಸ್ಥಾಪನೆ ಮತ್ತು

# ಫೂಲೆ ಇಂದ ಅಂಬೇಡ್ಕರ್‌ವರೆಗೆ

ಭಗವಾನ್

ಆಧಾರ : ದಿ ರ್ಯಾಡಿಕಲ್ ಹ್ಯೂಮನಿಸ್ಟ್

ಅವರ ಮರಣದವರೆಗೆ ಇವೆಲ್ಲ 1956 ರಲ್ಲಿ ನಡೆದ ಘಟನೆಗಳು. ಅಂಬೇಡ್ಕರ್ ಅವರ ಸಾರ್ವಜನಿಕ ಬದುಕು ಸಮರ್ಪಣ ಜೀವನದ ಒಂದು ದಾಖಲೆ ಆಗಿದೆ. ಅಸ್ಪೃಶ್ಯರು ತಮ್ಮ ಹಕ್ಕುಗಳಿಗೆ ಹೋರಾಡಲು ರಾಜಕೀಯ ಬಲ ಬೇಕೆಂದೂ ಅದಕ್ಕಾಗಿ ಸಂಘಟನೆ ಮತ್ತು ಆಧುನಿಕ ವಿದ್ಯಾಭ್ಯಾಸ ಅಗತ್ಯವೆಂದೂ ಅವರಿಗೆ ಬಹುಬೇಗ ಮನವರಿಕೆಯಾಯಿತು. ಜಾತಿಯ ಮೇಲುಕೀಳಿನ ಭಾವ ಪ್ರಬಲವಾಗಿರುವ ಸಾಂಪ್ರದಾಯಿಕ ಹಿಂದೂ ಧರ್ಮದ ಚೌಕಟ್ಟಿನಲ್ಲಿ ಅಸ್ಪೃಶ್ಯರಿಗೆ ಮತ್ತೆ ಮನುಷ್ಯತ್ವ ಗಳಿಸಿ ಕೊಡುವುದು ಕಷ್ಟವೆಂದು ಅವರಿಗೆ ಅನುಭವದಿಂದ ಚೆನ್ನಾಗಿ ವೇದ್ಯವಾಗಿತ್ತು. 1927ರಲ್ಲಿ ಮಹಾದಿಯಲ್ಲಿ ನಿಮ್ನವರ್ಗಗಳ ಸಭೆ ನಡೆಯುತ್ತಿದ್ದಾಗ ಅವರು 'ಮನಸ್ಮೃತಿ'ಯನ್ನು ಬಹಿರಂಗವಾಗಿ ಸುಟ್ಟು ಹಾಕಿದರು. ಇಂಡಿಯಾದ ಸಾರ್ವಜನಿಕ ಜೀವನದಲ್ಲಿ ಒಂದು ನವಶಕ್ತಿ ಉದಯವಾದದ್ದರ ಸಂಕೇತ ಅದು. ಸಾಮಾಜಿಕ ವಿಷಯಗಳಲ್ಲಿ ಎಲ್ಲಾ ಮೇಲುಜಾತಿಯ ಹಿಂದೂಗಳಿಗೂ ಮನು ಅತ್ಯಂತ ದೊಡ್ಡ ಪ್ರಮಾಣವಾಗಿದ್ದನು. ಅವನ ಸ್ಮೃತಿಯ ಪ್ರಕಾರ ಬ್ರಾಹ್ಮಣರು ಮೇಲ್ಮಟ್ಟದಲ್ಲಿಯೂ ಅಸ್ಪೃಶ್ಯರು ಕೀಳುಮಟ್ಟದಲ್ಲಿಯೂ ಇರಬೇಕು. ಭಾರತೀಯ ಸಾಮಾಜಿಕ ಇತಿಹಾಸದ ಮೇಲೆ ಪ್ರಾಚೀನ ಅಥವಾ ಅರ್ವಾಚೀನ ಗ್ರಂಥಗಳಲ್ಲಿ 'ಮನುಸ್ಮೃತಿ' ಯಷ್ಟು ಗಾಢ ಹಾಗೂ ದುಷ್ಟ ಪ್ರಭಾವ ಬೀರಿದ ಬೇರೆ ಗ್ರಂಥವಿಲ್ಲ. ಮನುಸ್ಮೃತಿಯನ್ನು ತಿರಸ್ಕರಿಸುವುದರ ಮುಖಾಂತರ ಅಂಬೇಡ್ಕರ್ ಅವರು ಭೇದಭಾವ ತೋರುವ ಹಿಂದೂ ಸಮಾಜದ ಸೈದ್ಧಾಂತಿಕ ನೆಲೆಗಟ್ಟನ್ನು ತಿರಸ್ಕರಿಸಿದರು. ಸಾರ್ವಜನಿಕ ಜೀವನದ ಪ್ರತಿಯೊಂದು ಕ್ಷೇತ್ರವೂ ಮಾನವೀಯ ಸಮಾನತೆಯ ನೀತಿಯ ಮೇಲೆ ನಿಲ್ಲಬೇಕೆಂದು ಫೂಲೆಯವರಂತೆ ಅವರು ಪ್ರತಿಪಾದಿಸಿದರು.

ಅಸ್ಪೃಶ್ಯರು ಹಳ್ಳಿಯ ಕೆರೆಗಳಲ್ಲಿ ನೀರು ಉಪಯೋಗಿಸುವಂತೆ ದೇವಸ್ಥಾನ ಪ್ರವೇಶಿಸುವಂತೆ ಹಕ್ಕು ಸ್ಥಾಪನೆ ಮಾಡಲು ಮಹಾದ್ ಮತ್ತು ನಾಸಿಕಗಳಲ್ಲಿ ಅಂಬೇಡ್ಕರ್ 1927 ಮತ್ತು 1935 ರ ಅವಧಿಯಲ್ಲಿ ಮಹರ್ ಸತ್ಯಾಗ್ರಹಗಳನ್ನು ನಡೆಸಿದರು. ಅವರ ಆಂದೋಲನಗಳಿಗೆ ಕಾಂಗ್ರೆಸ್ ನಿಂದ ಯಾವ ಬೆಂಬಲವೂ ಸಿಗಲಿಲ್ಲ. ಬದಲಾಗಿ, ಅಸ್ಪೃಶ್ಯರಿಗೆ ಪ್ರತ್ಯೇಕ ಮತ ಮಂಡಲಿ ಬೇಕೆಂಬ ಅವರವಾದ ಕಾಂಗ್ರೆಸ್ ನಾಯಕತ್ವವನ್ನು ವಿಶೇಷವಾಗಿ ಗಾಂಧೀಜಿಯನ್ನು ಕೆರಳಿಸಿತು. ರಾಷ್ಟ್ರದ ಸ್ವಾತಂತ್ರ್ಯಕ್ಕೆ ಅಂಬೇಡ್ಕರ್ ವಿರೋಧಿಯಾಗಿರಲಿಲ್ಲ; ಆದರೆ ಒಂದು ದೇಶ ಇನ್ನೊಂದು ದೇಶವನ್ನು ಆಳುವುದು ಹೇಗೆ ಸಾಧುವಲ್ಲ ಎಂದು ನೀವು ಭಾವಿಸುತ್ತೀರೋ ಹಾಗೆಯೇ ಒಂದು ವರ್ಗ ಅಥವಾ ಜಾತಿ ಇನ್ನೊಂದು ವರ್ಗ ಅಥವಾ ಜಾತಿಯನ್ನು ಆಳುವುದು ಸಾಧುವಲ್ಲ ಎಂದು ನೀವು ತಿಳಿಯಬೇಕೆಂದು ವಾದಿಸಿದರು. ಪ್ರತ್ಯೇಕ ಮತ ಮಂಡಲಿಗಳನ್ನು ಪಡೆಯಲು ಅವರು ಮಾಡಿದ ಪ್ರಯತ್ನಗಳು ಗಾಂಧೀಜಿಯಿಂದಾಗಿ ನೆರವೇರಲಿಲ್ಲ. ಗಾಂಧೀಜಿ ಉಪವಾಸ ಸತ್ಯಾಗ್ರಹವನ್ನು ಕೈಗೊಂಡು ಅದನ್ನು ವಿರೋಧಿಸಿದರು. ಒತ್ತಾಯದಿಂದ ಅಂಬೇಡ್ಕರ್ ರಾಜಿಯನ್ನು ಒಪ್ಪಿಕೊಳ್ಳಬೇಕಾಯಿತು; ಆದರೆ ಅವರಿಗೆ ಭಾರತೀಯ ರಾಷ್ಟ್ರೀಯ ಚಳುವಳಿಯ ನಾಯಕರಲ್ಲಿ ಅಪನಂಬಿಕೆ ಆಳವಾಯಿತು.

1935ರಲ್ಲಿ ಅಂಬೇಡ್ಕರ್ ಹಿಂದೂಧರ್ಮದಿಂದ ತಮ್ಮ ಸಂಪೂರ್ಣ ನಿರ್ಗಮನವನ್ನು ಸಾರ್ವಜನಿಕವಾಗಿ ಘೋಷಿಸಿದರು. ಅವರು ಸ್ವತಂತ್ರ ಕಾರ್ಮಿಕ ಪಕ್ಷವನ್ನು (**Independent Labour Party**) ಸ್ಥಾಪಿಸಿದರು. ಈ ಪಕ್ಷವು 1937ರ ಬೊಂಬಾಯಿ ಶಾಸನಸಭಾ ಚುನಾವಣೆಗಳಲ್ಲಿ ಸಾಕಷ್ಟು ಸ್ಥಾನಗಳನ್ನು ಗಳಿಸಿತು. 1942 ರಲ್ಲಿ ಅವರು ಪರಿಶಿಷ್ಟ ಜಾತಿಗಳ ಒಕ್ಕೂಟವನ್ನು (**Scheduled caste Federation**) ರಚಿಸಿದರು. ಮೂರುವರ್ಷಗಳ ತರುವಾಯ ಬಂದ 'ಪೀಪಲ್ಸ್ ಎಜುಕೇಶನ್ ಸೊಸೈಟಿ' (ಜನತಾ ಶಿಕ್ಷಣ ಸಂಸ್ಥೆ)ಯು ಅಸ್ಪೃಶ್ಯರ ಉನ್ನತ ವಿದ್ಯಾಭ್ಯಾಸದ ಪ್ರಸಾರಕ್ಕಾಗಿ ಮೀಸಲಾಯಿತು. ಒಂದು ಕಡೆ ಅವರು ತಮ್ಮ ಬರವಣಿಗೆಗಳ ಮುಖಾಂತರ ಗಾಂಧಿ ಮತ್ತು ರಾಷ್ಟ್ರೀಯ ಚಳುವಳಿಕಾರರ ವಿರುದ್ಧ ಉಗ್ರ ಹೋರಾಟವನ್ನು ನಡೆಸಿದರು. ಕಾರಣ ಇವರುಗಳು ಅಸ್ಪೃಶ್ಯರ ರಾಜಕೀಯ ಆಕಾಂಕ್ಷೆಗಳನ್ನು ಗುರುತಿಸಲಿಲ್ಲ. ಇನ್ನೊಂದು ಕಡೆ, ಭಾರತದ ಇತಿಹಾಸದ, ವಿಶೇಷವಾಗಿ ಶೂದ್ರರ ಮತ್ತು ಅಸ್ಪೃಶ್ಯರ ಉಗಮದ ಬಗ್ಗೆ ಅವರು ತಮ್ಮದೇ ಆದ ಅಸಾಂಪ್ರದಾಯಿಕ ವ್ಯಾಖ್ಯಾನಗಳನ್ನು ನೀಡಿದರು. ಫೂಲೆಯವರಂತೆ ಅಂಬೇಡ್ಕರ್ ಈ ಸಂಘರ್ಷವನ್ನು ಜನಾಂಗೀಯ ಮೂಲವೆಂದು ಭಾವಿಸಲಿಲ್ಲ. ಅವರ ಪ್ರಕಾರ, ಮೂಲತಃ ಶೂದ್ರರು ಪ್ರತ್ಯೇಕ ವರ್ಣದವರಲ್ಲ; ಇಂಡೊ-ಆರ್ಯ ಸಮಾಜದ ಕ್ಷತ್ರಿಯ ವರ್ಣದ ಭಾಗವಾಗಿದ್ದರು. ಬ್ರಾಹ್ಮಣರಿಗೂ ಶೂದ್ರ ರಾಜರಿಗೂ ನಿರಂತರ ದ್ವೇಷ ಇದ್ದುದರಿಂದ ಬ್ರಾಹ್ಮಣರು ಶೂದ್ರರಿಗೆ ಉಪನಯನ ಮಾಡಲು ನಿರಾಕರಿಸಿದರು; ತತ್ಪರಿಣಾಮವಾಗಿ ಶೂದ್ರರು ಸಾಮಾಜಿಕವಾಗಿ ಕೆಳಮಟ್ಟಕ್ಕೆ ತಳ್ಳಲ್ಪಟ್ಟರು. ಹಾಗೂ ನಾಲ್ಕನೆಯ ವರ್ಣವನ್ನು ಸ್ಥಾಪಿಸಿದರು. ಅಸ್ಪೃಶ್ಯರು ಮೂಲತಃ ಬೌದ್ಧರಾಗಿದ್ದರೆಂದು ಅವರು ವಾದಿಸಿದರು. ಹಿಂದೂ ಪುನರುತ್ಥಾನದ ಕಾಲದಲ್ಲಿ ಬ್ರಾಹ್ಮಣರ ಶ್ರೇಷ್ಠತೆಯನ್ನು ಬೌದ್ಧರು ಒಪ್ಪಿಕೊಳ್ಳದೆ ಹೋದುದರಿಂದ ಅವರನ್ನು ನಿಂದಿಸಿ ಅವರ ಆಸ್ತಿಪಾಸ್ತಿಯನ್ನು ಕಸಿದುಕೊಂಡು, ನಾಗರಿಕ ಸಮಾಜದಿಂದ ಹೊರಗಟ್ಟಿದರು. ಈ ವಾದದಲ್ಲಿ ಅವರು ಮುಂದೆ ಅಸ್ಪೃಶ್ಯರಿಗೆ ಬೌದ್ಧಧರ್ಮ ಸ್ವೀಕರಿಸಲು ಮಾಡಿದ ಮನವಿಯನ್ನೂ ಹಾಗೂ ಹಿಂದೂ ಧರ್ಮದ ಅಸಮಾನತೆಯನ್ನೂ ತಿರಸ್ಕರಿಸಿ ಬೌದ್ಧಧರ್ಮದ ಸಮಾನತಾ ನೀತಿಯನ್ನು ಅಂಗೀಕರಿಸಲು ಕರೆ ಕೊಡುವುದನ್ನು ನಿರೀಕ್ಷಿಸಬಹುದು.

ಭಾರತ ಸ್ವಾತಂತ್ರ್ಯಗಳಿಸಿದ ಹೊತ್ತಿಗೆ, ಅಂಬೇಡ್ಕರ್ ಅವರ ಕಟುಟೀಕಾಕಾರರೂ ಕೂಡ ಅವರು ಅಸ್ಪೃಶ್ಯರ ಪ್ರಧಾನ ನಾಯಕ ಮತ್ತು ಪ್ರತಿನಿಧಿ ಎಂಬುದನ್ನು ಗುರುತಿಸಲೇಬೇಕಾಯಿತು. ಸ್ವಾತಂತ್ರ್ಯದ ಜೊತೆಯಲ್ಲೇ ಉಪಖಂಡವು ಭಾರತ ಮತ್ತು ಪಾಕಿಸ್ತಾನ ಎಂದು ಇಬ್ಭಾಗವಾದಾಗ ರಾಷ್ಟ್ರೀಯ ಚಳವಳಿಯ ನಾಯಕರು ಭಾರತ ಇನ್ನೂ ಹೋಳಾಗದಂತೆ ತಡೆಯಲು ವಿಶೇಷ ಎಚ್ಚರ ವಹಿಸಿದರು. ಆದ್ದರಿಂದ ಅವರು ಅಸ್ಪೃಶ್ಯರ ವಿಶ್ವಾಸವನ್ನು ಗಳಿಸಲೂ, ಸಮಾಜದಲ್ಲಿ ಅವರಿಗೆ ಸ್ಥಾನಮಾನಗಳನ್ನು ಕೊಡಲೂ ಕಾಳಜಿ ವಹಿಸಿದರು. ಅವರು ಅಂಬೇಡ್ಕರ್ ಅವರ ಸಹಕಾರವನ್ನು ಕೋರಿದರು; ಅಂಬೇಡ್ಕರ್ ಅದನ್ನು ತಿರಸ್ಕರಿಸಲಿಲ್ಲ. ಸಾಮಾಜಿಕ ವಿಷಯಗಳಲ್ಲಿ ಅಂಬೇಡ್ಕರ್ ಉಗ್ರವಾದಿಯಾಗಿದ್ದರೂ ರಾಜಕೀಯದಲ್ಲಿ ಅವರು ಸದಾ ಸೌಮ್ಯವಾದಿಯಾಗಿದ್ದರು. ಅವರಿಗೆ ಹಿಂಸೆ ಹಿಡಿಸುತ್ತಿರಲಿಲ್ಲ. ಬದಲಿಗೆ ಅವರು ಫೂಲೆಯವರಂತೆ, ವಿದ್ಯಾಭ್ಯಾಸ ಮತ್ತು ಕಾನೂನುಗಳೇ ಬದಲಾವಣೆಯ ಹಸ್ತಗಳೆಂದು ದೃಢವಾಗಿ ನಂಬಿದ್ದರು. ನ್ಯಾಯವಾದಿಯಾಗಿಯೂ ಸಂವಿಧಾನ ನಿಪುಣನಾಗಿಯೂ ಅವರ ದಕ್ಷತೆ ಸುಪ್ರಸಿದ್ಧವಾಗಿತ್ತು. ಅವರು ನೀಡಿದ ಸಹಕಾರದಿಂದಾಗಿ ಸಂವಿಧಾನ ರಚನಾ ಸಮಿತಿಯ ಅಧ್ಯಕ್ಷರಾಗಿ ನೇಮಿತರಾದರು. (10ನೇ ಪುಟ ನೋಡಿ)

## ಭೂ ಒಡೆತನಕ್ಕೆ ಗೇಣಿದಾರರು ಕೊಡಬೇಕಾದ ಹಣಕ್ಕೆ ಸರ್ಕಾರದ ನೆರವು

## ವಿವರಗಳಿಗೆ ಭೂ ಅಭಿವೃದ್ಧಿ ಬ್ಯಾಂಕಲ್ಲಿ ವಿಚಾರಿಸಿ

ಭೂ ಸುಧಾರಣಾ ಕಾಯಿದೆಯನ್ನು ತ್ವರಿತಗತಿಯಲ್ಲಿ ಜಾರಿಗೆ ತಂದಿರುವ ರಾಜ್ಯಗಳಲ್ಲೇ ಮುಂಚೂಣಿಯಲ್ಲಿದೆ ಕರ್ನಾಟಕ. ಭೂ ನ್ಯಾಯ ಮಂಡಳಿಗಳ ಮೂಲಕ ಫೆಬ್ರವರಿ, 1982 ರವರೆಗೆ 80,90,74 ಅರ್ಜಿಗಳನ್ನು ಇತ್ಯರ್ಥಗೊಳಿಸಲಾಗಿದೆ. ಭೂ ಮಾಲೀಕರಿಂದ ವಶಪಡಿಸಿಕೊಳ್ಳಲಾದ 2,69,232 ಎಕರೆ ಜಮೀನಿನಲ್ಲಿ 32,173 ಎಕರೆ ಜಮೀನನ್ನು ಪರಿಶಿಷ್ಟ ಜಾತಿ ಮತ್ತು ಪಂಗಡದ ಭೂ ರಹಿತರಿಗೆ ಹಾಗೂ 26,075 ಎಕರೆ ಜಮೀನನ್ನು ಇತರ ಹಿಂದುಳಿದ ವರ್ಗದವರಿಗೆ ಹಂಚಲಾಗಿದೆ.

* ಭೂ ಒಡೆತನದ ಹಕ್ಕು ಪಡೆದ ಗೇಣಿದಾರರು ಭೂಮಿಗಾಗಿ ನೀಡಬೇಕಾದ ಹಣವನ್ನು ಸರ್ಕಾರಕ್ಕೆ ಪಾವತಿ ಮಾಡಬೇಕು.

* ಈ ಹಣವು ಎರಡು ರೂಗಳಿಗಿಂತ ಹೆಚ್ಚಾಗಿದ್ದರೆ ಮೊದಲ ಕಂತಿನಲ್ಲಿ ಎರಡು ಸಾವಿರ ರೂಗಳನ್ನೂ ಉಳಿದ ಹಣವನ್ನು 20 ವಾರ್ಷಿಕ ಕಂತುಗಳಲ್ಲಿ ಶೇಕಡಾ 5 1/2 ಬಡ್ಡಿಯೊಂದಿಗೆ ಪಾವತಿ ಮಾಡಬೇಕು.

* ರೈತರು ಈ ಹಣ ಪಾವತಿ ಮಾಡುವಲ್ಲಿ ನೆರವಾಗಲು ಸರ್ಕಾರ ಯೋಜನೆಯೊಂದನ್ನು ರೂಪಿಸಿದೆ.

* ಈ ಯೋಜನೆಯಂತೆ ಸಂಬಂಧಿಸಿದ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು ಹಣ ಪಾವತಿಗಾಗಿ ಸಾಲ ನೀಡುತ್ತವೆ.

* ಸಾಲದ ನೆರವು ಪಡೆಯಬಯಸುವ ರೈತನು ಭೂನ್ಯಾಯ ಮಂಡಳಿಯು ನೀಡಿದ ಜಮೀನು ಮಂಜುರಾತಿ ಆದೇಶವನ್ನು ಅರ್ಜಿ ಜೊತೆ ಬ್ಯಾಂಕಿಗೆ ಒದಗಿಸಿ ಕೊಡಬೇಕು.

* ಪಡೆಯುವ ಸಾಲಕ್ಕೆ ತನ್ನ ಜಮೀನನ್ನೇ ಆಧಾರ ಮಾಡಿಕೊಡಬೇಕು. ಇದೇ ಆಧಾರದ ಮೇಲೆ ರೈತನು ಭೂ ಅಭಿವೃದ್ಧಿಗಾಗಿ ಹೆಚ್ಚಿನ ಸಾಲವನ್ನು ಅದೇ ಬ್ಯಾಂಕಿನಿಂದಲೇ ಪಡೆಯಬಹುದು.

* ಈ ಸಂಬಂಧದಲ್ಲಿ ಹೆಚ್ಚಿನ ವಿವರಗಳಿಗೆ ಆಯಾ ತಾಲ್ಲೂಕಿನ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳಲ್ಲಿ ವಿಚಾರಿಸಬೇಕು.

**ಪ್ರಕಟಣೆ : ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ.**

# ಕೋಮುದ್ವೇಷಕ್ಕೆ ಅಲ್ಪಸಂಖ್ಯಾತನ ಬಲಿ

ಮೇಲುಕೋಟೆಯಿಂದ ಸುಮಾರು 6 ಕಿ.ಮೀ. ದೂರದಲ್ಲಿರುವ ಯುಳಗೆರೆ ಪ್ರದೇಶದಲ್ಲಿ ಇಮಾಮ್ ಖಾನ್ ಎಂಬ ಅಲ್ಪಸಂಖ್ಯಾತನೊಬ್ಬನ ನಾಲ್ಕು ವರ್ಷದ ಮಗು, ಹಸುಗಳು, ಇನ್ನಿತರ ವಸ್ತುಗಳೊಡನೆ ಇಡೀ ಗುಡಿಸಲು ಭಸ್ಮವಾಗಿರುವುದು ಕೋಮು ದ್ವೇಷದ ಪ್ರತೀಕಾರದಂತೆಯೂ, ಅಲ್ಪ ಸಂಖ್ಯಾತನೊಬ್ಬ ಭೂಮಿಗಾಗಿ ಪಟ್ಟ ಶ್ರಮದ ನಿರ್ಥಕ ಸಾಹಸದಂತೆಯೂ ಕಂಡುಬರುತ್ತಿದೆ. ಈ ಘಟನೆ ನಡೆದದ್ದು ಅಕ್ಟೋಬರ್ 5 ನೇ ತಾರೀಖಿನ ನಡುರಾತ್ರಿಯಲ್ಲಿ.

ಯುಳಗೆರೆ ಮೇಲುಕೋಟೆಯಿಂದ ಸುಮಾರು 6 ಕಿ. ಮೀ. ದೂರದಲ್ಲಿ ದಕ್ಷಿಣಾಭಿಮುಖವಾಗಿ ಕೆ.ಆರ್.ಎಸ್. ಕಡೆಗೆ ಹೋಗುವ ದಾರಿಯಲ್ಲಿ ಬರಿಕಲ್ಲು ದಿಣ್ಣೆಗಳಿಂದ ಕೂಡಿದ ಪ್ರದೇಶ. ಗುಡ್ಡದ ಕೆಳಭಾಗದಿಂದ ಹರಿಯುವ ಜಲದ ನೀರನು ಉಪಯೋಗಿಸಿ ತಗ್ಗು ಪ್ರದೇಶದಲ್ಲಿ ಬೇಸಾಯ ಮಾಡಲಾಗಿದೆ. ಹತ್ತು-ಹನ್ನೆರಡು ವರ್ಷಗಳ ಹಿಂದೆ ಈ ಗುಡ್ಡದ ಮೇಲೆ ಒಬ್ಬ ಸನ್ಯಾಸಿಯು ಬಂದು ನೆಲೆಸಿದ. 5-6 ವರ್ಷಗಳ ನಂತರ್ರು ಜಕ್ಕನಹಳ್ಳಿಯಿಂದ ಇಮಾಮ್‌ಖಾನ್‌ರನ್ನು ಈ ಸನ್ಯಾಸಿಯು ಕರೆದು ತಂದು ತಾನು ವ್ಯವಸಾಯ ಮಾಡುತ್ತಿದ್ದ ಪ್ರದೇಶದಲ್ಲಿ ಇರಿಸಿದ. ಇದಾದ ಕೆಲವು ವರ್ಷಗಳಲ್ಲಿ ಸನ್ಯಾಸಿಯು ಅಲ್ಲಿ ಕಾಣದಾದ.

ಅಲ್ಲೇ ಉಳಿದ ಇಮಾಮ್‌ಖಾನ್‌ರಿಗೆ ದರಖಾಸ್ತಿನಲ್ಲಿ 3-4 ಎಕರೆ ಖುಷ್ಕಿ ಜಮೀನು ಮಂಜೂರಾಗಿತ್ತೆಂದೂ ಆತ ಸುತ್ತಮುತ್ತಲ 12 ಎಕರೆಯಷ್ಟು ಪ್ರದೇಶವನ್ನು ಆಬದ್ದಿಗೆ ತಂದಿದ್ದರೆಂದು ತಿಳಿದು ಬಂತು. ಖಾನ್‌ರು ಜಮೀನಿನ ಮೇಲೆಯೇ ಕೆಳಭಾಗದ ಜಮೀನುಗಳಿಗೆ ನೀರು ಹೋಗಬೇಕಾಗಿದ್ದರಿಂದ ಕೆಳಭಾಗದ ರೈತರಿಗೆ ಖಾನ್‌ರು ತೊಂದರೆ ಕೊಡುತ್ತಿದ್ದರೆಂದು ಹೇಳುವಂತೆ ಈ ಪ್ರದೇಶದ ಸುತ್ತಮುತ್ತಲಿನ ಕೆಲಸಕ್ಕೆ ಬಂದ ಜನರು ಇವರ ಗುಡಿಸಿನಲ್ಲಿಯೇ ವಿಶ್ರಾಂತಿ ಪಡೆಯುತ್ತಿರೆಂದೂ ಜನ ಹೇಳುತ್ತಾರೆ. ಇಮಾಮ್ ಖಾನ್‌ರು ಪೈಲ್ಸ್ ರೋಗಕ್ಕೆ ಔಷಧಿಕೊಡುತ್ತ ಜನಪ್ರಿಯರಾಗಿದ್ದರೆಂದು ತಿಳಿದುಬಂದಿದೆ.

ಈ ಮುಂಚೆ ಒಂದು ಬಾರಿ ಪಕ್ಕದ ಹೊಸಳ್ಳಿ ಗ್ರಾಮದ ಕೆಲವರು ಇಮಾಮ್‌ಖಾನ್‌ರ ಕೋಳಿಗಳನ್ನು ಕದ್ದು, ಚಿಟ್ಟನಹಳ್ಳಿ ಗ್ರಾಮಪಂಚಾಯಿತಿಯವರಿಂದ ವಿಚಾರಣೆ ನಡೆದು ನೂರು ರೂಪಾಯಿಗಳ ದಂಡ ವಿಧಿಸಲಾಗಿತ್ತಂತೆ. ಆ ಭಾಗದ ಜನರೊಡನೆ ಪರಿಚಯವಿದ್ದ ಜನಪದ ಟ್ರಸ್ಟಿನ ಸುರೇಂದ್ರ ಕೌಲಗಿಯವರೊಡನೆ ಹೋದರೂ ಜನರು ಭಯಭೀತಿಯಿಂದ ಮಾತನಾಡದೆ ತಮ್ಮ ತಮ್ಮ ಮನೆಗಳ ಬಾಗಿಲುಗಳನ್ನು ಹಾಕಿಕೊಳ್ಳುತ್ತಿದ್ದರು. ಕೌಲಗಿಯವರ ಪ್ರಯತ್ನದಿಂದ ಕೆಲವರು ಬಂದು ಯುಳಗೆರೆಯ ಕ್ರೌರ್ಯದ ಬಗ್ಗೆ ತಮಗೇನು ಅರಿವಿಲ್ಲವೆಂದು ಹೇಳತೊಡಗಿದರು. ಈ ಘಟನೆಯ ಸಂಬಂಧವಾಗಿ 24 ಜನರನ್ನು ಬಂಧಿಸಲಾಗಿದ್ದು, 6 ಮಂದಿ ತಲೆತಪ್ಪಿಸಿಕೊಂಡಿದ್ದಾರಂತೆ.

ಇದೇ ಘಟನೆಗೆ ಹಿನ್ನೆಲೆಯಾಗಿರುವ ಜಮೀನಿನ ಸಮಸ್ಯೆ ಬಗ್ಗೆ ಕೇಳಿದಾಗ "ನಮ್ಮ ಜಮೀನು ಮಾಡುವುದಕ್ಕೇ ಮಳೆಯಿಲ್ಲ, ಅವನ ಜಮೀನು ನಿಮಗ್ಯಾಕೆ" ಎಂದು ಹೇಳಿದರು. ಇಮಾಮ್ ಖಾನ್‌ರು ಕುಟುಂಬ ಯೋಜನೆಯನ್ನು ಪಾಲಿಸುತ್ತಿರಲಿಲ್ಲವೆಂದು ಇದೇ ಜನ ದೂರಿದರು. ನಾವು ಚಿಟ್ಟನಹಳ್ಳಿ ಬಿಡುವ ಸಮಯದಲ್ಲಿ ಪಕ್ಕದ ಹಳ್ಳಿಯ ಜವರೇಗೌಡ ಎಂಬುವರು ಬಂದು ಕೌಲಗಿಯವರಿಗೆ ನಮಸ್ಕರಿಸಿದರು. ಈಗ ತಾನೆ ತಾವು ಮಂಡ್ಯದ ಬಳಿಯ ಚಂದಗಾಲು ಗ್ರಾಮದಿಂದ ಆರ್.ಎಸ್.ಎಸ್. ಕ್ಯಾಂಪ್ ಮುಗಿಸಿಕೊಂಡು ಬರುತ್ತಿರುವುದಾಗಿ ತಿಳಿಸಿದರು. ಅವರನ್ನು ಇಮಾಮ್‌ಖಾನ್‌ರ ವ್ಯಕ್ತಿತ್ವದ ಬಗ್ಗೆ ಪ್ರಶ್ನಿಸಿದಾಗ "ಈ ಹಳ್ಳಿಯ ಜನರು ಸರಿಯಾಗಿ ಕೆಲಸ ಮಾಡಿಲ್ಲ, **Planed** ಆಗಿ ಮಾಡಬೇಕಾಗಿತ್ತು" ಎಂದರು.

ನನ್ನ ಗ್ರಹಿಕೆಯ ಪ್ರಕಾರ ನಾಗಮಂಗಲದ ಸುತ್ತಮುತ್ತ ನಡೆದ ಕೋಮುಗಲಭೆಯ ಪ್ರೇರಣೆಯಿಂದ ಎಷ್ಟೋ ದಿನಗಳಿಂದ ಹೆಪ್ಪುಗಟ್ಟಿದ್ದ ದ್ವೇಷವು ಒಮ್ಮೆಗೇ ಭುಗಿಲೆದ್ದಿದೆ. ಒಂದೇ ಮುಸ್ಲಿಂ ಕುಟುಂಬ ಬಲಿಯಾಗಿರುವುದರಿಂದ ಕೋಮುಗಲಭೆಯಂತೆ ಹೊರನೋಟಕ್ಕೆ ಕಾಣದಿದ್ದರೂ ಅದರ ಫಲವೇ ಇದಾಗಿದೆ. ಅಲ್ಪ ಸಂಖ್ಯಾತನಾದವನು ಶ್ರಮವಹಿಸಿದರೂ ಹೇಗೆ ಭೂಮಿ ದಕ್ಕದು ಎನ್ನುವುದಕ್ಕೆ ಜೀವಂತ ಸಾಕ್ಷಿಯಾಗಿ ಇಮಾಮ್‌ಖಾನ್‌ರು ನಿಂತುಕೊಳ್ಳುತ್ತಾರೆ.

—ಎ. ಲಕ್ಷ್ಮಣರಾವ್ ಕದಂ

## ಕುಷ್ಟಗಿಯಲ್ಲಿ ಪಂಜಿನ ಮೆರವಣಿಗೆ

ಕುಷ್ಟಗಿ ದಿ॥ 13-10-82 ರಿಂದ 25-10-82ರ ವರೆಗೆ 13 ದಿನಗಳ ಕಾಲ ರೈತರು ಮತ್ತು ದಲಿತರು ಉಪವಾಸ ಸತ್ಯಾಗ್ರಹ ನಡೆಸಿ, ಎರಡು ಬಾರಿ ಬೃಹತ್ ಮೆರವಣಿಗೆ ಮಾಡಿದರು. ಬೇಡಿಕೆಗಳನ್ನು ಈಡೇರಿಸುವಲ್ಲಿ ಅಧಿಕಾರಿಗಳು ನಿರ್ಲಕ್ಷ್ಯ ಮನೋಭಾವ ತಾಳಿದ ಕಾರಣ ರೊಚ್ಚಿಗೆದ್ದ ರೈತರು ಮತ್ತು ದಲಿತರು ನೂರಾರು ಸಂಖ್ಯೆಯಲ್ಲಿ ಸುಮಾರು ಹಳ್ಳಿಗಳಿಂದ ದಿ. 25-10-82 ರಾತ್ರಿ 9 ಗಂಟೆಗೆ ಕರ್ನಾಟಕ ಪ್ರಾಂತ ರೈತ ಸಂಘದ ಬ್ಯಾನರಿನ ಅಡಿಯಲ್ಲಿ ಪಂಜಿನ ಮೆರವಣಿಗೆ ನಡೆಸಿದರು. ಮೆರವಣಿಗೆಯ ಮುಖಂಡತ್ವವನ್ನು ದಲಿತ ಸಂಘರ್ಷ ಸಮಿತಿ ಸಂಚಾಲಕರಾದ ಮರಿಯಪ್ಪ ಮೇಲಿನಮನಿ ಮತ್ತು ಕರ್ನಾಟಕ ಪ್ರಾಂತ ರೈತ ಸಂಘದ ಸಂಚಾಲಕರಾದ ವಿರೂಪಾಕ್ಷ ಹಿರೇಮಠ ವಹಿಸಿದ್ದರು. ಊರಿನ ಮುಖ್ಯ ಬೀದಿಗಳಲ್ಲಿ ಸುತ್ತಾಡಿಕೊಂಡು ಬಂದ ಮೆರವಣಿಗೆ ಸತ್ಯಾಗ್ರಹ ಕುಳಿತ ಸ್ಥಳವನ್ನು ತಲುಪಿತು. ಮೆರವಣಿಗೆಯಲ್ಲಿ ಮುಖ್ಯವಾಗಿ ಕೂಲಿ ಬೇಕು, ಕಲಸಬೇಕು, ಎಂಬ ಘೋಷಣೆಗಳನ್ನು ಕೂಗಲಾಯಿತು.

ಮೆರವಣಿಗೆಯ ನಂತರ ರೈತರನ್ನು ಮತ್ತು ದಲಿತರನ್ನು ಉದ್ದೇಶಿಸಿ ವಿರೂಪಾಕ್ಷ ಹಿರೇಮಠ ಮತ್ತು ಬಸವರಾಜ ಕಂಬಳಿ ಮಾತನಾಡಿದರು. ರೈತರು ಮತ್ತು ದಲಿತರು ಒಕ್ಕಟ್ಟಾಗಿ ಹೋರಾಡಿದರೆ ಮಾತ್ರ ನಮ್ಮ ಬೇಡಿಕೆಗಳು ಈಡೇರಲು ಸಾಧ್ಯ ಹಾಗೂ ಈ ಭ್ರಷ್ಟ ಸರ್ವಾಧಿಕಾರಿ ವ್ಯವಸ್ಥೆಯನು ಕಿತ್ತೊಗೆದು ರೈತ ಮತ್ತು ದಲಿತಪರ ವ್ಯವಸ್ಥೆಯನ್ನು ತರಲು ಸಾಧ್ಯವೆಂದು ಹೇಳಿದರು.

# ಭಾರತದ ಅಪೂರ್ಣ ಕ್ರಾಂತಿ:

[7ನೇ ಪುಟದಿಂದ]

ನವರಾಷ್ಟ್ರಕ್ಕೆ ಸಂವಿಧಾನ ನೀಡುವ ಹೊಣೆ ಸಂವಿಧಾನ ರಚನಾ ಸಮಿತಿಯದಾಯಿತು. ಸ್ವತಂತ್ರ ಭಾರತದ ಮೊಟ್ಟಮೊದಲ ಮಂಡಲದಲ್ಲಿ ಅವರನ್ನು ಕಾನೂನು ಮಂತ್ರಿಯನ್ನಾಗಿ ಮಾಡಲಾಯಿತು.

ಇಪ್ಪತ್ತು ವರ್ಷಗಳ ಹಿಂದೆ ಅವರು ಬಹಿರಂಗವಾಗಿ ಸುಟ್ಟು ಹಾಕಿದ 'ಮನುಸ್ಮೃತಿ'ಗೆ ಬದಲಾಗಿ ಸಂವಿಧಾನವನ್ನು ದೇಶಕ್ಕೆ ಒದಗಿಸುವ ಅವಕಾಶ ಲಭಿಸಿತು. ಪ್ರಜಾಸತ್ತಾತ್ಮಕ ಸಂವಿಧಾನ ರಚನೆಯೂ ಹಾಗೂ ಅದನ್ನು ಸಂವಿಧಾನ ಸಭೆಯಲ್ಲಿ ಮಂಡಿಸುವಾಗಲೂ ಅವರು ಪ್ರಮುಖ ಪಾತ್ರವನ್ನು ವಹಿಸಿದರು. ಸಂವಿಧಾನದ 3ನೆಯ ಭಾಗ ಮೂಲಭೂತ ಹಕ್ಕುಗಳಿಗೆ ಸಂಬಂಧಿಸಿದೆ. ಅದು ಸಮಾನತೆಯ ಹಕ್ಕನ್ನು ಒಳಗೊಂಡಿದೆ; "ಅಸ್ಪೃಶ್ಯತೆಯನ್ನು ಆಚರಿಸಿದರೆ ಕಾನೂನಿನ ಪ್ರಕಾರ ಶಿಕ್ಷೆಯಾಗುತ್ತದೆ ಎಂದು 17ನೇ ವಿಧಿ ಖಚಿತಪಡಿಸಿದೆ. ಸಂವಿಧಾನದ 16ನೇ ಭಾಗ ಪರಿಶಿಷ್ಟ ಬುಡಕಟ್ಟುಗಳಿಗೆ ವಿಶೇಷ ಅವಕಾಶಗಳನ್ನು ನೀಡಿದೆ. ಇವುಗಳು ಫೂಲೆ ಮತ್ತು ಅಂಬೇಡ್ಕರ್ ತಮ್ಮ ಜೀವನಮಾನವೆಲ್ಲ ಹೋರಾಡಿದ ತತ್ವಗಳ ಫಲ. ಕೊನೆಪಕ್ಷ, ಅಧಿಕೃತ ಸಿದ್ಧಾಂತ ಮತ್ತು ಮೂಲಭೂತ ಕಾನೂನುಗಳ ಮಟ್ಟದಲ್ಲಿ ದೀನ ದಲಿತರಿಗೆ ಮಾನವ ಹಕ್ಕುಗಳು ನಿಸ್ಸಂದೇಹವಾಗಿ ಪ್ರತಿಷ್ಠಾಪಿತವಾದವು.

ಆದರೆ ವಾಸ್ತವಿಕ ಸಾಮಾಜಿಕ ಧೋರಣೆ ಮತ್ತು ವರ್ತನೆಗಳ ಮಟ್ಟದಲ್ಲಿ ಆಗಲಿಲ್ಲ. ರಾಷ್ಟ್ರೀಯ ನಾಯಕರಲ್ಲಿ ಕೆಲವರು ಪ್ರಜಾಸತ್ತಾತ್ಮಕ ವಿಚಾರಗಳಿಗೆ ಅಧಿಕೃತವಾಗಿ ಬದ್ಧರಾಗಿದ್ದಾರೆಂದು, ತಲೆತಲಾಂತರದಿಂದ ಬಂದ ಮಡಿಮೈಲಿಗೆಯ ಭಾವನೆಯನ್ನೂ, ಜಾತಿಪದ್ಧತಿಯ ತಾರತಮ್ಯತೆಯಿಂದ ಅನುಭವಿಸುವ ಐಹಿಕ ಸುಖ ಸೌಲಭ್ಯಗಳನ್ನೂ ಸವರ್ಣೀಯ ಹಿಂದೂಗಳು ಬಿಟ್ಟುಬಿಡುತ್ತಾರೆಂದು ನಿರೀಕ್ಷಿಸಲು ಸಾಧ್ಯವಿಲ್ಲ. ರಾಷ್ಟ್ರೀಯ ನಾಯಕರ ವಿಷಯದಲ್ಲಿ ಹೇಳುವುದಾದರೆ, ಅವರ ಆಶ್ವಾಸನೆ ಮತ್ತು ಬದ್ಧತೆ ಅನೇಕ ವೇಳೆ ತೋರಿಕೆಯ ಹೊರತು ಅಪ್ಪಟವಲ್ಲ. ನಿರಾಶರಾಗಿ 1951ರಲ್ಲಿ ಅಂಬೇಡ್ಕರ್ ಸಚಿವ ಸ್ಥಾನಕ್ಕೆ ರಾಜೀನಾಮೆ ಇತ್ತಾಗ ರಾಷ್ಟ್ರೀಯ ನಾಯಕರ ಜೊತೆಗಿನ ಅವರ ಸಹಕಾರ ಕೊನೆಗೊಂಡಿತು. ಅಸ್ಪೃಶ್ಯರ ವಿದ್ಯಾಭ್ಯಾಸ ಮತ್ತು ಸಂಘಟನೆಯ ಕಾರ್ಯದಲ್ಲಿ ಮತ್ತೆ ನಿರತರಾದರು. ಅವರ ಸಾವಿಗೆ ಮುನ್ನ 1956ರಲ್ಲಿ ರಾಜಕೀಯ ಹೋರಾಟವನ್ನು ನಡೆಸಲು ರಿಪಬ್ಲಿಕನ್ ಪಕ್ಷದ ರಚನೆಯನ್ನು ಪ್ರಕಟಿಸಿದರು. ಅಸ್ಪೃಶ್ಯವರ್ಗದಿಂದ ಲಕ್ಷಾಂತರ ಮಂದಿಯನ್ನು ತನ್ನ ತೆಕ್ಕೆಗೆ ಎಳೆದು ಕೊಂಡಿದ್ದ ಬೌದ್ಧಧರ್ಮವನ್ನು ಕೂಡ ಅವರು ಸ್ವೀಕರಿಸಿದರು.

ಅಂಬೇಡ್ಕರ್ ಸತ್ತ ಮೇಲೆ ಅಸ್ಪೃಶ್ಯರ ಸಾಮಾನ್ಯ ಸ್ಥಿತಿಗತಿಗಳಲ್ಲಿ ಹೇಳಿಕೊಳ್ಳುವಂಥ ಬದಲಾವಣೆ ಆಗಿಲ್ಲ. ಸಂವಿಧಾನದ 17ನೆಯ ವಿಭಾಗದಲ್ಲಿನ ಅವಕಾಶಗಳು ಸ್ಮರಣೀಯವಾದವು, ನಿಜ : ಶಾಸನ ಸಭೆಗಳಲ್ಲಿ ಪರಿಶಿಷ್ಟ ಜಾತಿಗಳಿಗೆ ನಿರ್ದಿಷ್ಟ ಸ್ಥಾನಗಳ ಮೀಸಲಾತಿ ಇದೆ; ಅವರಿಗೆ ಸಾಕಷ್ಟು ಸರ್ಕಾರಿ ಹುದ್ದೆಗಳನ್ನು ಕಾಯ್ದಿರಿಸಲಾಗಿದೆ ; ಅಸ್ಪೃಶ್ಯರನ್ನು ರಕ್ಷಿಸಲು ಕಾನೂನು ಸಿಬ್ಬಂದಿಯಿದೆ. ಆದರೆ ಪರಿಶಿಷ್ಟ ಜಾತಿಗಳ ಮತ್ತು ಬುಡಕಟ್ಟುಗಳ ಕೆಲ ನಾಯಕರು ಸಂವಿಧಾನದ ಸೌಲಭ್ಯಗಳನ್ನು ಉಪಯೋಗಿಸಿಕೊಂಡಿದ್ದರೂ ಅಸ್ಪೃಶ್ಯರಲ್ಲಿ ಬಹುಪಾಲು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತ್ಯೇಕವಾಗಿ ಮತ್ತು ನಗರಗಳಲ್ಲಿ ಕೊಳೆಗೇರಿಗಳಲ್ಲಿ ಇನ್ನೂ ವಾಸಿಸುತ್ತಿದ್ದಾರೆ. ಅವರಲ್ಲಿ ಬಹುಮಂದಿ ದಟ್ಟ ದರಿದ್ರರು ನಿರಕ್ಷರ ಕುಕ್ಷಿಗಳು ; ಅವರ ಸಂಘ ಸಮಿತಿಗಳು ದುರ್ಬಲವೂ ಪರಿಣಾಮಹೀನವೂ ಆಗಿವೆ. ಸವರ್ಣೀಯ ಹಿಂದೂಗಳ ಮನೋಧರ್ಮ ಮತ್ತು ಧೋರಣೆಗಳು ಹೆಚ್ಚು ಜ್ಞಾನಮಯವಾಗಿವೆ ಎಂದು ಕಾಣುವುದಿಲ್ಲ ; ಬದಲಿಗೆ, ದೇಶದ ನಾನಾ ಭಾಗಗಳಿಂದ ಬರುವ ವರದಿಗಳನ್ನು ನೋಡಿದರೆ ಅವರ ಮನೋಭಾವ ಕ್ರೂರವೂ ದಮನಕಾರಿಯೂ ಆಕ್ರಮಣಶೀಲವೂ ಆಗಿದೆ. ಆಡಳಿತ ಯಂತ್ರವು, ವಿಶೇಷವಾಗಿ ಜಿಲ್ಲಾ ಮತ್ತು ಇತರ ಕೆಳ ಹಂತಗಳಲ್ಲಿ, ದೀನದಲಿತ ಜಾತಿಗಳ ಬಗ್ಗೆ ಸಹಾನುಭೂತಿ ಪರವಾಗಿಲ್ಲ. ಭಾರತದ ಸಂವಿಧಾನನಲ್ಲಿ ವಿಶೇಷ ಅವಕಾಶಗಳನ್ನು ಮಾಡಿದ್ದರೂ ಫೂಲೆ ಮತ್ತು ಅಂಬೇಡ್ಕರ್ ಆಶಿಸಿದ ಸಾಮಾಜಿಕ ಕ್ರಾಂತಿ, ಸ್ವಾತಂತ್ರ್ಯ ಬಂದು ಮೂವತ್ತೈದು ವರ್ಷಗಳಾದರೂ ಕೂಡ, ಇನ್ನೂ ನೆರವೇರದೆ ಅಪೂರ್ಣವಾಗಿಯೆ ಉಳಿದಿದೆ.

ಭಾರತದ ಗ್ರಾಮಾಂತರ ಪ್ರದೇಶಗಳಲ್ಲಿ ವಾಸಿಸುವ ಅಸ್ಪೃಶ್ಯ ಕುಟುಂಬಗಳು ಸಾರ್ವಜನಿಕ ಕೆರೆಬಾವಿಗಳಿಂದ ನೀರು ಬಳಸಲು ಸಾಧ್ಯವಾಗಿಲ್ಲ. ವಿಶೇಷವಾಗಿ ಬಿಹಾರ್, ಉತ್ತರಪ್ರದೇಶ ಮತ್ತು ಗುಜರಾತ್ ರಾಜ್ಯಗಳಲ್ಲಿ ಕಗ್ಗೊಲೆಗಳು ಸವರ್ಣೀಯ ಹಿಂದೂಗಳಿಂದ ಸಂಘಟನಾತ್ಮಕವಾಗಿ ಆಗಾಗ್ಗೆ ನಡೆಯುತ್ತಿವೆ. ಈ. ಪೆರುಮಾಳ್ ಸಮಿತಿಯ ವರದಿಯ ಪ್ರಕಾರ "ಭಾರತಾದ್ಯಂತ ಅಸ್ಪೃಶ್ಯತೆ ಉಗ್ರ ರೂಪದಲ್ಲಿ ಇನ್ನೂ ಆಚರಣೆಯಲ್ಲಿದೆ".

ಅಂಬೇಡ್ಕರ್ ಅವರು ಸಾಧಿಸಿದ ಸಂಗತಿಗಳು ಇವು ಎಂದು ಹೇಳಬಹುದು :

೧. ಅಸ್ಪೃಶ್ಯರ ಸಮಸ್ಯೆಯ ಬಗ್ಗೆ ಸಾರ್ವಜನಿಕ ಪ್ರಜ್ಞೆಯನ್ನು ತೀವ್ರಗೊಳಿಸುವುದು ;

೨. ಕೊನೆಪಕ್ಷ, ಸವರ್ಣೀಯ ಹಿಂದೂಗಳ ಪ್ರಾಬಲ್ಯವನ್ನು ಪ್ರತಿಭಟಿಸಲು ಅಸ್ಪೃಶ್ಯರಲ್ಲೆ ಒಂದು ಗುಂಪನ್ನು ಬೆಳೆಸುವುದು ; ಮಾನವ ಹಕ್ಕುಗಳಿಗಾಗಿ ಸೈದ್ಧಾಂತಿಕವಾಗಿ ಹೋರಾಡಲು ಅವರಿಗೆ ಒಂದು ಸಿದ್ಧಾಂತ, ರಾಜಕೀಯ ಸಂಘಟನೆ ಮತ್ತು ಶೈಕ್ಷಣಿಕ ಸಂಸ್ಥೆಗಳನ್ನು ಒದಗಿಸುವುದು ;

೩. ಅಸ್ಪೃಶ್ಯರಿಗೆ ಅನುಕೂಲಕರವಾದ ತತ್ವಗಳು ಮತ್ತು ಕಾರ್ಯಕ್ರಮಗಳ ಬಗ್ಗೆ ಔಪಚಾರಿಕ ಆಶ್ವಾಸನೆಯನ್ನು ಪ್ರಧಾನವಾಗಿ ಸವರ್ಣೀಯ ಹಿಂದೂಗಳೇ ಇರುವ ರಾಷ್ಟ್ರದ ನಾಯಕರಿಂದ ತೆಗೆದುಕೊಳ್ಳುವುದು.

ದೀನ ದಲಿತರ ಬಗೆಗಿನ ಸಮರ್ಪಣ ಭಾವ ಮತ್ತು ಅಸಾಧಾರಣ ಮೇಧಾಶಕ್ತಿ ಅಂಬೇಡ್ಕರರಲ್ಲಿ ಸೇರಿದ್ದರಿಂದ ಅವರು ಪ್ರಭಾವಶಾಲಿ ನಾಯಕರಾದರು. ಆದರೆ ಸಮಾಜ ಕ್ರಾಂತಿಯ ಸ್ಥಿತಿಗತಿಗಳು ಯಾವುದೇ ಒಬ್ಬ ಸಮರ್ಪಣ ಭಾವದ ವ್ಯಕ್ತಿಯಿಂದಾಗಲೀ ಮೇಧಾವಿಯಿಂದಾಗಲೀ ರೂಪಿತವಾಗುವುದಿಲ್ಲ. ಸಾಮಾಜಿಕ ಮತ್ತು ರಾಜಕೀಯ ಶಕ್ತಿಗಳಿಗೆ ಸಂಪ್ರದಾಯ ಪ್ರಭುತ್ವ ದಾರಿಮಾಡಿಕೊಡಲು ಪಶ್ಚಿಮ ಯುರೋಪು ಮೂರು ಪ್ರಮುಖ ಚಳವಳಿಗಳಾದ ಪುನರುಜ್ಜೀವನ, ಫ್ರಾನ್ಸಿನ ಮಹಾಕ್ರಾಂತಿ ಮತ್ತು ಕೈಗಾರಿಕಾ ಕ್ರಾಂತಿಯನ್ನೂ ದಾಟಿಹೋಗಬೇಕಾಯಿತು. ಇಂಡಿಯಾದಲ್ಲಿ ಪ್ರಾಚೀನ ಪ್ರಭುತ್ವ ಇನ್ನೂ ಪೂರ್ಣವಾಗಿ ಪ್ರಬಲವಾಗಿದೆ ; ಹಳ್ಳಿಗಳಲ್ಲಿ ಬಹುವಾಗಿ ವಾಸಿಸುವ ಜನರ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನಲ್ಲಿ ಅದು ವಿಶೇಷವಾಗಿದೆ. ರಾಷ್ಟ್ರೀಯ ನಾಯಕರು ಗಣರಾಜ್ಯಕ್ಕೆ ಕೊಟ್ಟ ರಾಜಕೀಯ ಪ್ರಜಾಪ್ರಭುತ್ವದ ಚೌಕಟ್ಟು ಬಹುಮಟ್ಟಿಗೆ ಅದರ ಉಪಧಿಕಾರವಾಗಿದೆ. ಬೌದ್ಧಿಕ ಮತ್ತು ಕೈಗಾರಿಕಾ ಕ್ರಾಂತಿಯಾಗದೆ ಭಾರತೀಯ ಸಮಾಜದ ಯಾವುದೇ ಬಗೆಯ ನೈಜ ಪರಿವರ್ತನೆ ಸಾಧ್ಯವಿಲ್ಲ. ಇದು ಅಂಬೇಡ್ಕರ್ ಅವರಿಗೆ ಚೆನ್ನಾಗಿ ಗೊತ್ತಿತ್ತು. ಅದ್ದರಿಂದಲೇ ಅವರು ಇವೆರಡನ್ನೂ ತೀವ್ರವಾಗಿ ಪ್ರತಿಪಾದಿಸಿದರು. ಹಾಗೆ ಮಾಡುವುದರಿಂದಾಗಿ ಅವರು ಕೇವಲ ಅಸ್ಪೃಶ್ಯರ ನಾಯಕರಾಗುವುದಕ್ಕಿಂತ ಹೆಚ್ಚಾಗಿ ಭಾರತದ ಆಧುನೀಕರಣದ ಶಕ್ತಿಗಳ ನಾಯಕರಾದರು. ಪ್ರಾಚೀನ ಪದ್ಧತಿಯ ಸೈದ್ಧಾಂತಿಕ-ಸಾಂಸ್ಕೃತಿಕ ಉರುಳನ್ನು ಆಧುನಿಕ ಶಕ್ತಿಗಳು ಕತ್ತರಿಸದ ಹೊರತು ಅಸ್ಪೃಶ್ಯರ ಭವಿಷ್ಯವಷ್ಟೇ ಅಲ್ಲ ಇಂಡಿಯಾದ ಭವಿಷ್ಯ ನೆಟ್ಟಗಾಗುವುದಿಲ್ಲ.

(ಸೌಜನ್ಯ : ಸಮನ್ವಯ)



ಈಗ ಎಲ್ಲ ಕಡೆ ಸಿಗುತ್ತಿದೆ.

# ಈ ಶತಮಾನದ ನೂರು ಇಂಗ್ಲಿಷ್ ಕವನಗಳು

ರೂಪಾಂತರ : ರಾಮಚಂದ್ರ ಶರ್ಮ

ಬೆಲೆ: ಸಾಧಾರಣ : ರೂಪಾಯಿ ಹದಿನಾರು ; ಕ್ಯಾಲಿಕೋ : ರೂಪಾಯಿ ಇಪ್ಪತ್ತೇಳು.

ಈ ಸಂಗ್ರಹದಲ್ಲಿ ಇಂಗ್ಲಿಷ್ ಸಾಹಿತ್ಯದ ಬಹು ಮುಖ್ಯ ಕವಿಗಳಾದ ಥಾಮಸ್ ಹಾರ್ಡಿ, ಟಿ. ಎಸ್. ಎಲಿಯಟ್, ಎಸ್ರಾ ಪೌಂಡ್, ಡಬ್ಲ್ಯು. ಬಿ. ಯೇಟ್ಸ್, ಡಬ್ಲ್ಯು. ಹೆಚ್. ಆಡನ್, ಪಿಲಿಪ್ ಲಾರ್ಕಿನ್, ಸಿಲ್ವಿಯಾ ಪ್ಲಾತ್, ಡೆನಿಸ್ ಥಾಮ್ಸನ್, ಥಾಮ್‌ಗನ್ ಮೊದಲಾದ ಸುಮಾರು ನಲವತ್ತು ಕವಿಗಳ ಕವನಗಳ ರೂಪಾಂತರಗಳಿವೆ. ಇವರಲ್ಲಿ ಅನೇಕರ ಕವನಗಳು ಇದೇ ಮೊದಲು ಕನ್ನಡಕ್ಕೆ ಬರುತ್ತಿವೆ. ಇಲ್ಲಿನ ಕವನಗಳನ್ನು ಓದುವುದೆಂದರೆ ಈ ಶತಮಾನದ ಇಂಗ್ಲಿಷ್ ಕಾವ್ಯದ ಸ್ಥೂಲ ಪರಿಚಯ ಪಡೆದಂತೆ. ಜೊತೆಗೆ ಹೊಸತಾಗಿ ಕವನ ಬರೆಯುತ್ತಿರುವ ಕವಿಗಳಿಗೆ, ಪ್ರಯೋಗ ಪಟುಗಳಿಗೆ ಕಾವ್ಯದಲ್ಲಿ ಹೊಸದಾರಿಗಳನ್ನೂ ಈ ಸಂಕಲನ ತೋರಿಸಬಲ್ಲುದು.

# ಅಂಬೇಡ್ಕರ್‌ರವರಿಗೊಂದು ಪತ್ರ

ಸ್ವರ್ಗದಲ್ಲಿರುವ ಡಾ|| ಅಂಬೇಡ್ಕರ್‌ರವರಿಗೆ ಸಕ್ಷೇಮ ವಂದನೆಗಳು. ಅದಾಗಿ ತಿಳಿಸುವುದೇನೆಂದರೆ : ನೀವು ಸ್ವರ್ಗಕ್ಕೆ ಹೋಗಿ ಬಹಳ ದಿನಗಳಾದವು. ಈ ಪುತ್ರ ನೋಡಿದೊಡನೆ ಭಾರತಕ್ಕೊಮ್ಮೆ ಜರೂರು ಹೊರಟು ಬರಬೇಕು. ನೀವು ಸ್ವಾತಂತ್ರ್ಯೋತ್ತರ ಭಾರತದ ಇತ್ತೀಚಿನ ವರುಷಗಳ ಕಥೆ ಕೇಳಿದ್ದರೆ ಭಾರತಕ್ಕೊಮ್ಮೆ ಮರಳಿ ಬಂದು ಕಪ್ಪು ಇತಿಹಾಸವನ್ನು ತಿದ್ದಿ ಬರೆಸುತ್ತಿದ್ದಿರಿ.

ದೇಶ ಪ್ರಗತಿ ಪಥದತ್ತ ಓಡುತ್ತಿದೆ. ಅದರ ವೇಗ ಜಾಸ್ತಿ ; ಓಡಿ ಓಡಿ ಬ್ರೇಕ್ ಫೇಲಾದ ಲಾರಿಯಂತೆ! ಸಮತಟ್ಟು ರಸ್ತೆ ಬಿಟ್ಟು ಹಳ್ಳ-ದಿಣ್ಣೆ, ಪ್ರಪಾತಗಳತ್ತ ಓಡುತ್ತಿದೆ—ಜೋಲಿ ಹೊಡೆಯುತ್ತ ! ಮುಂದೆ ಅಪಾಯ. ದಲಿತರ ಕಗ್ಗೊಲೆ ಎಂಬ ಅಪಘಾತವಾಗುವ ಮುನ್ನ ಬಂದು ರಾಜಕೀಯ ಪುಡಾರಿಗಳ ಈ ಲಾರಿಯನ್ನು ಸಡೆ ಬಡಿದು ನಿಲ್ಲಿಸಿ ; ರಕ್ಷಿಸಿ.

ನಿಮ್ಮ ಶಿಷ್ಯ-ಶಿಷ್ಯೆಯರೆಂದು ಕೊಳ್ಳುವ ಜನ, ಪಟ್ಟಭದ್ರರು, ಅಧಿಕಾರದ ರುಚಿಯುಂಡವರು ರಾಜಕೀಯ ಕಣಗಳಲ್ಲಿ—ನೀವು ಆ ಜನ, ಈ ಜನ ಘಟ್ಟದ ಮೇಲಿನ ಗಿರಿಜನ, ಒಟ್ಟಿನಲ್ಲಿ ಮಾತು ಬಾರದ ದನ ಎಂದೆಲ್ಲಾ ವಿಂಗಡಿಸುತ್ತಿದ್ದಾರೆ. ಕೆಟ್ಟ, ಸುಟ್ಟ ನಿಕೃಷ್ಟ ಜಾತಿಗಳ ಹಣೆಪಟ್ಟಿ ಕಟ್ಟಿಕೊಂಡು ಕತ್ತಿಯಿಡಿದು ಅಖಾಡಕ್ಕಿಳಿದಿದ್ದಾರೆ. ಆಟ-ಗೀಟಗಳಲ್ಲಿ ಮುಂದಿದ್ದಾರೆ. ಕ್ರಿಕೆಟ್, ಟೆನ್ನಿಸ್‌ನಲ್ಲಲ್ಲದಿದ್ದರೂ ಅಧಿಕಾರಕ್ಕಾಗಿ ಕಿತ್ತಾಟ, ರಾಜಕೀಯ ದೊಂಬರಾಟ, ಪಕ್ಷಾಂತರದ ಕೋಡಂಗಿಯಾಟ ಇತ್ಯಾದಿ, ಇತ್ಯಾದಿ.

ವಿಜ್ಞಾನದಲ್ಲೂ ಮುಂದೂ—ಆರ್ಯಭಟ ಹಾರಿದೆ. ಕೆಲದಿನಗಳಲ್ಲಿ ಅಮೇರಿಕೆಯ ವಿಜ್ಞಾನಿಗಳು ಇಂಡಿಯಾವನ್ನೇ ಪಟಮಾಡಿ ಹಾರಿಸಿದರೆ ಹೇಗೆಂದು ಯೋಚಿಸುತ್ತಿದ್ದಾರಂತೆ ! ಆದುದರಿಂದ ಮತ್ತೊಮ್ಮೆ ಇಂಡಿಯಾಕ್ಕೆ ಬಂದು ಜನರನ್ನು ಉಳಿಸಿ. ಹೆಚ್ಚಿನ ವಿಷಯಗಳಿವೆ. ಆದರೆ ಬರೆಯುವುದಕ್ಕಿಂತ ಒಮ್ಮೆ ನೀವೇ ಬಂದು ಕಣ್ಣಾರೆ ನೋಡಿ !

ಇಂತಿ ನಿಮ್ಮ
**ಹನುಮಂತರಾಯಪ್ಪ**
ಕುರಿಪಾಳ್ಯ.

# ಭೂಮಿ ಬೇಕು-ಎಲ್ಲಿದೆ!?

ತಮಗೂ ಭೂಮಿ ಬೇಕು, ಜೀತದಿಂದ ವಿಮೋಚನೆ ಹೊಂದ ಬೇಕೆಂಬ ಹಂಬಲ ಪುತ್ತೂರು ತಾಲ್ಲೂಕು ನಿಡ್ಪಳ್ಳಿ ಗ್ರಾಮದ ದಲಿತರಿಗೆ. ಬಂಡವಾಳಶಾಹಿ, ಭೂಮಾಲೀಕರ ವಾರಸುದಾರರಾದ ಸರ್ಕಾರಗಳು 35 ವರ್ಷಗಳಿಂದಲೂ ಭೂಮಿ ಹಂಚುವ ಘೋಷಣೆಯಲ್ಲಿಯೇ ಕಾಲ ತಳ್ಳುತ್ತಿವೆ. ಘೋಷಣೆಗಳು ಆಚರಣೆಯಾಗಬೇಕೆಂದು ಪುತ್ತೂರು ತಾಲ್ಲೂಕಿನ ಈ ಹಳ್ಳಿಯ ದಲಿತರು ಸಂಘಟಿತರಾಗಿ ಜಮೀನಿಗೆ ಅರ್ಜಿ ಸಲ್ಲಿಸಿ ಹೋರಾಟ ಪ್ರಾರಂಭಿಸಿದ್ದಾರೆ. ಈ ಸಂಬಂಧವಾಗಿ ಹಕ್ಕು ಪತ್ರಗಳು ಸಿಕ್ಕಿದ್ದರೂ ಭೂಮಿ ಎಲ್ಲಿದೆ ಎಂದು ಗೊತ್ತಿಲ್ಲ. ಅಧಿಕಾರಿಗಳು ಭೂಮಿಯ ಗಡಿಗಿಂಗಡನೆ ಮಾಡಿಕೊಡಲು ತಯಾರಿಲ್ಲ. ಏಕೆಂದರೆ ಅಲ್ಲಿಯ ದಲಿತರು ದ. ಸಂ. ಸ. ಅಡಿಯಲ್ಲಿ ಹೋರಾಡುತ್ತಿರುವುದು ಗ್ರಾಮ ಪಂಚಾಯಿತಿ ಅಧ್ಯಕ್ಷನಿಗೆ ಕಿರಿಕಿರಿಯುಂಟು ಮಾಡುತ್ತಿದೆ. ಹೋರಾಟದಿಂದ ಮಾತ್ರವೇ ಭೂಮಿ ರಕ್ಷಣೆ ಸಾಧ್ಯ ಎಂದು ಅಲ್ಲಿಯ ದಲಿತರು ನಂಬಿ ಅದರಂತೆ ನಡೆಯುತ್ತಿದ್ದಾರೆ.



ಸಂಪಾದಕ : ಹುಲ್ಲುಕೆರೆ ಮಹದೇವ, ಪ್ರಕಾಶಕ : ಗೋವಿಂದಯ್ಯ, ವಿನಯ ಪ್ರಿಂಟರಿ, 2514, ಎ. ಕೆ. ಜಿ. ಕೊಪ್ಪಲು, ಮೈಸೂರು-14.